# ಅಚಲ

ತಿಂಗಳ ಪತ್ರಿಕೆ

ಜುಲೈ 2002


☼ ಪತ್ರಿಕೋದ್ಯಮ ಮತ್ತು ಮಹಿಳಾ ಚಳುವಳಿ

- ಡಾ|| ವಿಜಯಾದಬ್ಬೆ

☼ ಜಾಗತೀಕರಣದ ಹಿನ್ನೆಲೆಯಲ್ಲಿ ಪತ್ರಿಕೆಗಳು ಮತ್ತು ಮಹಿಳೆ

- ಜಿ. ಎನ್. ಮೋಹನ್

☼ ಹೆಣ್ಣು - ಎರಡು ದೃಷ್ಟಿ (ಅನುವಾದಗಳು)

ಸೃಷ್ಟಿಕರ್ತೆ-ರಾಮಲಿಂಗಪ್ಪ ಟಿ. ಬೇಗೂರು

ಸ್ತ್ರೀ ವಿಘ್ನ ಶ್ರಮಣನ ಉಪದೇಶ - ಡಾ|| ಎಲ್. ಬಸವರಾಜು

☼ ಮಹಿಳೆ ಮಾನಭಂಗ ಮತ್ತು ಪ್ರತ್ಯಕ್ಷ ಸಾಕ್ಷಿ

- ನೇಮಿಚಂದ್ರ






ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು

# ಅಚಲ

ಸಂಪುಟ - 17 ಸಂಚಿಕೆ : 6-7

ಸಂಪಾದಕ ಮಂಡಲಿ
ಎನ್. ಗಾಯತ್ರಿ
ನೇಮಿಚಂದ್ರ, ದೇವಿ,
ಬಿ. ಎನ್. ಸುಮಿತ್ರಾಬಾಯಿ
ಶಾಂತಾನಾಗರಾಜ್
ಹೆಚ್. ಎನ್: ಗೀತಾ
ಹೇಮಲತಾ ಮಹಿಷಿ

ಪ್ರಕಾಶಕರು
ಜಾಗೃತಿ ಮಹಿಳಾ ಅಧ್ಯಯನ
ಕೇಂದ್ರ
ಬೆಂಗಳೂರು

ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10 ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು. ಎಂ. ಓ. ಫಾರ್ಮಿನ ಕೊನೆಯ ಭಾಗದಲ್ಲಿ ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು.

ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.

Achala - Edited by
Dr. N. Gayathri

Published by
Dr. G. Ramakrishna on
behalf of Jagruthi Mahila
Adhyayana Kendra

*Printed at*
Lipi Mudrana
**Bangalore - 560 004**


**ಆತ್ಮೀಯ ಓದುಗರೇ,**

ಹಲವಾರು ಅನಿವಾರ್ಯ ಕಾರಣಗಳಿಂದ ಜೂನ್ ಸಂಚಿಕೆಯನ್ನು ತರಲಾಗಲಿಲ್ಲ. ದಯವಿಟ್ಟು ಕ್ಷಮಿಸಿ. ಜೂನ್ ಮತ್ತು ಜುಲೈ ಸಂಚಿಕೆಯನ್ನು ಒಟ್ಟಾಗಿ ನಿಮ್ಮ ಕೈಯಲ್ಲಿಡುತ್ತಿದ್ದೇವೆ.

ಡಾ॥ ವಿಜಯಾದಬ್ಬೆ ಮತ್ತು ಪತ್ರಕರ್ತ ಶ್ರೀ ಜಿ. ಎಸ್. ಮೋಹನ್‌ರವರ ಲೇಖನಗಳು ಈ ಸಂಚಿಕೆಯಲ್ಲಿವೆ. ಅಚಲ ಪತ್ರಿಕೆಯು ಆರು ವರ್ಷಗಳ ಹಿಂದೆ ದಶಮಾನೋತ್ಸವವನ್ನು ಆಚರಿಸಿದಾಗ, 'ಮಹಿಳೆ ಮತ್ತು ಸಮೂಹ ಮಾಧ್ಯಮಗಳು' ಎಂಬ ವಿಚಾರ ಸಂಕಿರಣವನ್ನು ಪತ್ರಿಕಾ ಅಕಾಡೆಮಿಯ ಸಹಯೋಗದೊಂದಿಗೆ ಜಾಗೃತಿ ಮಹಿಳಾ ಅಧ್ಯಯನ ಕೇಂದ್ರವು ಏರ್ಪಡಿಸಿತ್ತು. ಆ ಸಂದರ್ಭದಲ್ಲಿ ಮಂಡಿಸಿದ ಪ್ರಬಂಧಗಳಿವು. ಈ ಪ್ರಬಂಧಗಳು ರಚನೆಯಾಗಿ ಆರು ವರ್ಷಗಳೇ ಕಳೆದಿದ್ದರೂ ಅವುಗಳು ಪ್ರಸ್ತಾಪಿಸಿರುವ ವಿಷಯವು ಇಂದಿಗೂ ಪ್ರಸ್ತುತವಾಗಿದೆ. ಆ ಕಾರಣಕ್ಕಾಗಿಯೇ ಅದನ್ನು ಈ ಸಂಚಿಕೆಯಲ್ಲಿ ಪ್ರಕಟಿಸುತ್ತಿದ್ದೇವೆ. ಈ ಲೇಖನಗಳನ್ನು ಬರೆದುಕೊಟ್ಟ ಅವರಿಬ್ಬರಿಗೂ ವಂದನೆಗಳು. ಈ ಮಾಲಿಕೆಯ ಎಲ್ಲ ಉಪನ್ಯಾಸಗಳು ಮುಂದಿನ ಅಚಲ ಸಂಚಿಕೆಗಳಲ್ಲಿ ಬೆಳಕು ಕಾಣಲಿವೆ.

---

ನಮ್ಮ ಚಂದಾದಾರರಿಗೆ ಮತ್ತೊಮ್ಮೆ

**ನಮ್ರ ಸೂಚನೆ :** ದಯವಿಟ್ಟು ಚಂದಾ ನವೀಕರಿಸಿ ಮತ್ತು ನಿಮ್ಮ ಸ್ನೇಹಿತರಿಗೆ ಮತ್ತು ಆಪ್ತರಿಗೆ ಈ ಪತ್ರಿಕೆಯನ್ನು ಪರಿಚಯಿಸಿ.

---


**ಅಚಲ ವಿಳಾಸ :**

108, ಸ್ಕೈಲೈನ್ ಸುರಭಿ, 14-ಪಿ, ವಿದ್ಯಾಪೀಠ ರಸ್ತೆ,
ಬನಶಂಕರಿ 3ನೇ ಹಂತ, ಬೆಂಗಳೂರು - 560 085

ಸಂಪಾದಕೀಯ

# ರಾಷ್ಟ್ರಪತಿ ಅಭ್ಯರ್ಥಿಯಾದ ಮೊದಲ ಮಹಿಳೆ

ಮುಖ್ಯಮಂತ್ರಿ, ರಾಜ್ಯಪಾಲೆ, ಪ್ರಧಾನಮಂತ್ರಿಯಂತಹ ಅಧಿಕಾರದ ಮುಖ್ಯಸ್ಥಾನಗಳನ್ನೆಲ್ಲಾ ಅಲಂಕರಿಸಿರುವ ಭಾರತದ ಮಹಿಳೆಗೆ ಮೊದಲ ಬಾರಿಗೆ ರಾಷ್ಟ್ರಪತಿಸ್ಥಾನಕ್ಕೂ ಅಭ್ಯರ್ಥಿಯಾಗುವ ಅವಕಾಶ ದೊರೆತದ್ದು ಇತ್ತೀಚಿನ ವಿಶೇಷ ದಕ್ಷಿಣ ಏಷ್ಯಾದ ರಾಷ್ಟ್ರಗಳಲ್ಲಿ ಮಹಿಳೆಯರು ಅಧ್ಯಕ್ಷ ಸ್ಥಾನವನ್ನು ಅಲಂಕರಿಸಿರುವುದು ವಿಶೇಷವಲ್ಲದಿದ್ದರೂ ಭಾರತದಲ್ಲಿ ಇಂತಹ ಸ್ಥಾನಕ್ಕೆ ಸ್ಪರ್ಧಿಸುವ ಅವಕಾಶ ಮಹಿಳೆಯೊಬ್ಬರಿಗೆ ದೊರೆತದ್ದು ಪರಿಸ್ಥಿತಿಯ ಬಿಕ್ಕಟ್ಟಿನಿಂದಲೇ ಹೊರತು ಸ್ತ್ರೀ ವಿಶೇಷ ಕಾಳಜಿಯಿಂದೇನೂ ಅಲ್ಲ. ಆಳುವ ಬಿ.ಜೆ.ಪಿ. ಮತ್ತು ಎನ್.ಡಿ.ಎ.ಯ ರಾಜಕೀಯ ಕುತಂತ್ರ ಮತ್ತು ಕಾಂಗ್ರೆಸ್ ಸಮಯಸಾಧಕತನದಿಂದಾಗಿ ಕ್ಯಾಪ್ಟನ್ ಲಕ್ಷ್ಮಿ ಸೆಹಗಾಲ್‌ರವರಿಗೆ ಎಡ ಮತ್ತು ಅವರ ಮಿತ್ರ ಪಕ್ಷಗಳ ಬೆಂಬಲಿತ ಅಭ್ಯರ್ಥಿಯಾಗುವ ಅವಕಾಶ ದೊರೆಯಿತು. ಚುನಾವಣೆಗೆ ನಿಲ್ಲುವಾಗಲೇ ಸೋಲುವುದು ನಿಶ್ಚಿತವಾಗಿದ್ದರೂ ಕ್ಯಾಪ್ಟನ್ ಲಕ್ಷ್ಮಿಯವರು ಅಭ್ಯರ್ಥಿಯಾದದ್ದು ರಾಜಕೀಯದಲ್ಲಿ ಮಹಿಳೆಯರ ಸ್ಥಾನವನ್ನು ಕುರಿತಂತೆ ಕೆಲವೊಂದು ಗಂಭೀರ ಸಂಗತಿಗಳನ್ನು ಪ್ರಕಟಿಸಿದೆ.

ಸ್ವಾತಂತ್ರ್ಯ ಹೋರಾಟಗಾರ್ತಿ, ಮಹಿಳಾ ನಾಯಕಿಯಾಗಿದ್ದ ಅಮ್ಮುಕುಟ್ಟಿ ಮತ್ತು ಪ್ರಖ್ಯಾತ ನ್ಯಾಯವಾದಿ ಡಾ॥ ಸ್ವಾಮಿನಾಥ್‌ನ್‌ರ ಮಗಳಾಗಿ ಮದ್ರಾಸಿನಲ್ಲಿ ಎಂಭತ್ತೇಳು ವರ್ಷಗಳ ಹಿಂದೆ ಜನಿಸಿದ ಲಕ್ಷ್ಮಿ ಸ್ವಾಮಿನಾಥನ್‌ಗೆ ಬಾಲ್ಯದಿಂದಲೇ ಹೋರಾಟದ ಗಾಳಿಯೇ ಉಸಿರಾಯಿತು. ಅಮ್ಮನೊಡನೆ ವಿದೇಶಿ ಬಟ್ಟೆ ಸುಡಲು ಮುಂದಾದರು. ಆ ಸ್ವಾತಂತ್ರ್ಯ ಜ್ವಾಲೆಯಲ್ಲಿ ತಮ್ಮ ಆಟಿಕೆಗಳನ್ನು, ಚಂದದ ಬಟ್ಟೆ ಬರೆಗಳನ್ನು ಬೆಂಕಿಗೆ ದೂಡಿದರು. ಹೆಂಡದ ಅಂಗಡಿಗಳ ಮುಂದೆ ಪಿಕೆಟಿಂಗ್ ನಡೆದಾಗ ಅಲ್ಲಿಯೂ ಲಕ್ಷ್ಮಿಯವರು ಅಮ್ಮನೊಡನೆ ಹಾಜರು. ವಿದ್ಯಾಭ್ಯಾಸ ಮುಂದುವರೆಸುತ್ತಿದ್ದಾಗ ಸಮಾಜ ಕಾರ್ಯಕ್ಕೆ ಉತ್ತಮ ವಾಹಕವೆಂದು ವೈದ್ಯಕೀಯ ಶಿಕ್ಷಣ ಪಡೆಯಲು ಮುಂದಾದರು. ವೈದ್ಯೆಯಾಗಿ ತರಬೇತಾದ ಲಕ್ಷ್ಮಿ 1940ರಲ್ಲಿ ಸಿಂಗಪುರಕ್ಕೆ ತೆರಳಿ ಆಸ್ಪತ್ರೆ ತೆರೆದದ್ದು ಕೂಲಿ ಜನರ, ಬಡ ಭಾರತೀಯರ ಶುಶ್ರೂಷೆಗೆಂದು. ಅಲ್ಲಿಯೇ ಇಂಡಿಯನ್ ಇಂಡಿಪೆಂಡೆನ್ಸ್ ಲೀಗ್‌ನಲ್ಲಿ ಸಕ್ರಿಯ ಕಾರ್ಯಕರ್ತೆಯಾಗಿಯೂ ದುಡಿದರು.

ಸುಭಾಷ್‌ಚಂದ್ರ ಬೋಸರು ಸಿಂಗಪುರಕ್ಕೆ ಬಂದು ಭಾರತವನ್ನು ಬ್ರಿಟೀಷರ ದಾಸ್ಯದಿಂದ ಮುಕ್ತಗೊಳಿಸಲು ಐ.ಎನ್.ಎ.ಯನ್ನು ಕಟ್ಟಿದಾಗ ಅದರ ಆರಂಭದಿಂದ ಐ.ಎನ್.ಎ.ಯ ವಿವಿಧ ಕಾರ್ಯಚಟುವಟಿಕೆಗಳಲ್ಲಿ ಲಕ್ಷ್ಮಿ ತಮ್ಮನ್ನು ತೊಡಗಿಸಿಕೊಂಡರು. ಎ.ಎನ್.ಎ.ಯ ಭಾಗವಾಗಿ ಮಹಿಳೆಯರ ಯೋಧ ಪಡೆಯನ್ನು ಆರಂಭಿಸುವ ಯೋಚನೆ ಬಂದಾಗ ಡಾಕ್ಟರ್ ಲಕ್ಷ್ಮಿ ಅದರ ನೇತೃತ್ವ ವಹಿಸಿದರು. ಹೀಗಾಗಿ ರಾಣಿ ಝಾನ್ಸಿ ರೆಜಿಮೆಂಟ್‌ನ ಕ್ಯಾಪ್ಟನ್ ಆಗಿ ಲಕ್ಷ್ಮಿಯವರು ಸ್ವಾತಂತ್ರ್ಯ ಹೋರಾಟದ ಸಾಗರದಲ್ಲಿ ವೀರೋಚಿತ ಸ್ಥಾನ ಪಡೆದರು. ಅವರ ಹೋರಾಟ ವಿಜಯವನ್ನು ಪಡೆಯದಿದ್ದರೂ ಸ್ವಾತಂತ್ರ್ಯಾನಂತರ ವೀರ ಸೇನಾನಿ ಕಲೋನೆಲ್ ಸೆಹಗಲ್‌ರನ್ನು ವಿವಾಹವಾಗಿ ತಮ್ಮ ವೈದ್ಯ ವೃತ್ತಿಯಿಂದ ಸಾವಿರಾರು ಬಡವರ ನೋವಿಗೆ ಮದ್ದಾದರು.

ತಮ್ಮದು ಯಾವಾಗಲೂ ಸೋಲುವ ಹೋರಾಟದ ನೇತೃತ್ವವೆಂದು ಹೇಳಿಕೊಳ್ಳುವ ಲಕ್ಷ್ಮಿ ಹೋರಾಟಕ್ಕೆ ಬೇಕಾದ ತಾತ್ವಿಕ ಬದ್ಧತೆ ಮತ್ತು ಪ್ರಾಮಾಣಿಕತೆಗೆ ಹೆಸರಾದವರು. ಅಧಿಕಾರಕ್ಕಾಗಿನ ಹೋರಾಟವು ಅವರಿಗೆ ಜಯ ನೀಡದಿದ್ದರೂ, ಅನ್ಯಾಯದ ವಿರುದ್ಧದ ಹೋರಾಟದಲ್ಲಿ ಅಪಾರ ಗೆಲುವು ಮತ್ತು ಸಂತಸಗಳನ್ನು ಪಡೆದ ಕ್ಯಾಪ್ಟನ್ ಲಕ್ಷ್ಮಿ ಭಾರತದ ದೊಡ್ಡ ಮಹಿಳಾ ಸಂಘಟನೆಗಳಲ್ಲೊಂದಾದ ಪ್ರಜಾಸತ್ತಾತ್ಮಕ ಮಹಿಳಾ ಸಂಘಟನೆಯ ರಾಷ್ಟ್ರೀಯ ಉಪಾಧ್ಯಕ್ಷೆಯೂ ಹೌದು.

ದೇಶ ಇಂದು ಎದುರಿಸುತ್ತಿರುವ ಬಿಕ್ಕಟ್ಟಿನ ಮತ್ತು ಗಂಭೀರ ಪರಿಸ್ಥಿತಿಯಲ್ಲಿ ಶಾಂತಿಪ್ರಿಯ ಮತ್ತು ಸೆಕ್ಯುಲರ್ ಶಕ್ತಿಗಳ ನೇತೃತ್ವ ಅಗತ್ಯವಾಗಿ ಬೇಕಿದೆ. ಕ್ಯಾಪ್ಟನ್ ಲಕ್ಷ್ಮಿ ಈ ಎರಡೂ ಮೌಲ್ಯಗಳ ಪ್ರತೀಕವಾಗಿರುವರು. ದೇಶವಿಭಜನೆಯ ನಂತರ ರಕ್ತದ ಕೋಡಿ ಹರಿದ ಸಂದರ್ಭದಲ್ಲಿ ನಿರಾಶ್ರಿತರ ಪುನರ್ವಸತಿ ಮತ್ತು ಆರೈಕೆಗಾಗಿ ಲಕ್ಷ್ಮಿ ಟೊಂಕ ಕಟ್ಟಿ ನಿಂತರು. ಬಡವರ ಮತ್ತು ದೀನದಲಿತರಿಗಾಗಿ ಲಕ್ಷ್ಮಿ ಮಾಡಿದ ಅಪಾರ ಸೇವಾಕಾರ್ಯ ಕಾನ್ಪುರದಲ್ಲಿ ಈಗಲೂ ಜನರ ಮನೆಮಾತಾಗಿದೆ. 1971ರಲ್ಲಿ ಪಾಕಿಸ್ಥಾನ ಇಬ್ಭಾಗವಾಗಿ ಬಾಂಗ್ಲಾದೇಶದ ಉದಯವಾದಾಗ ಪಶ್ಚಿಮ ಬಂಗಾಳಕ್ಕೆ ನಿರಾಶ್ರಿತರ ಮಹಾಪೂರವೇ ಹರಿದುಬಂತು. ಆಗಲೂ ಕ್ಯಾಪ್ಟನ್ ಲಕ್ಷ್ಮಿ ನಿರಾಶ್ರಿತರ ಶಿಬಿರಗಳಲ್ಲಿ ಹಲವಾರು ತಿಂಗಳ ಕಾಲ ಪರಿಹಾರ ಕಾರ್ಯದಲ್ಲಿ ತೊಡಗಿಕೊಂಡರು. 1984ರಲ್ಲಿ ಇಂದಿರಾಗಾಂಧಿಯ ಸಾವಿನ ನಂತರ ಸಿಖ್ ವಿರೋಧಿ ಗಲಭೆಗಳು ನಡೆದಾಗ ಸಿಖ್‌ಕುಟುಂಬಗಳ ಪರವಾಗಿ

ಹೋರಾಟ ನಡೆಸಿದರು. ಅವರ ಬಡಾವಣೆಯಲ್ಲಿನ ಸಿಖ್‌ರ ಅಂಗಡಿ ಮುಗ್ಗಟ್ಟುಗಳು, ಮನೆ ಮಠಗಳ ರಕ್ಷಣೆಗಾಗಿ ಜನರನ್ನು ಸಂಘಟಿಸಿದರು. 1998ರಲ್ಲಿ ರಾಷ್ಟ್ರಪತಿಯವರಿಂದ ಪದ್ಮಭೂಷಣ ಪ್ರಶಸ್ತಿ ಪಡೆದ ಕ್ಯಾಪ್ಟನ್ ಲಕ್ಷ್ಮಿ ಸನ್ಮಾನಗಳಿಂದ ಹಿಗ್ಗಿದವರೇನೂ ಅಲ್ಲ. ಉತ್ತರ ಪ್ರದೇಶದ ಸರ್ಕಾರದಿಂದ ಮುಲಾಯಂಸಿಗ್‌ಯಾದವ್ ಲಕ್ಷ್ಮಿಗೆ ಪ್ರಶಸ್ತಿ ನೀಡಲು ಮುಂದಾದಾಗ ಅವರ ಸರ್ಕಾರದ ನೀತಿ ವಿರೋಧಿಸಿ ಪ್ರಶಸ್ತಿ ತಿರಸ್ಕರಿಸಿದರು. ಉತ್ತರಾಂಚಲದ ಬೇಡಿಕೆಯಿಟ್ಟು ಜನತೆ ಹೋರಾಟ ನಡೆಸುತ್ತಿದ್ದಾಗ ಸರ್ಕಾರ ಹೋರಾಟಗಾರರನ್ನು ಸದೆಬಡಿದಿತ್ತು. ನೂರಾರು ಮಹಿಳೆಯರು ತೀವ್ರತರದ ಗಾಯಗಳಿಗೆ ಒಳಗಾಗಿದ್ದರು. ಸರ್ಕಾರದ ಇಂತಹ ನೀತಿಯನ್ನು ಪ್ರತಿಭಟಿಸಿ ಲಕ್ಷ್ಮಿ ತಮಗೆ ನೀಡಿದ ಪ್ರಶಸ್ತಿಯನ್ನು ತಿರಸ್ಕರಿಸಿದ್ದರು.

ಶಾಸನಸಭೆ ಮತ್ತು ಪಾರ್ಲಿಮೆಂಟಿನಲ್ಲಿ ಮಹಿಳೆಯರ ರಾಜಕೀಯ ಮೀಸಲಾತಿಗಾಗಿ ಹೋರಾಟ ನಡೆಯುತ್ತಿರುವ ಇಂದಿನ ಸಂದರ್ಭದಲ್ಲಿ ಇಂತಹ ಹೋರಾಟ ಮತ್ತು ಮೀಸಲಾತಿ ಅರ್ಥಪೂರ್ಣವಾಗಬೇಕಾದರೆ ಲಕ್ಷ್ಮಿಯಂತಹ ಮಹಿಳಾ ನಾಯಕಿಯರು ರಾಜಕೀಯ ನೇತೃತ್ವ ವಹಿಸಬೇಕು. ಭ್ರಷ್ಟಾಚಾರ, ಅವಕಾಶವಾದಿತ್ವ, ಕೋಮುವಾದದಿಂದ ಭ್ರಷ್ಟರಾಗಿರುವ ಹಲವಾರು ಮಹಿಳಾ ರಾಜಕಾರಣಿಗಳು ಇಂದು ದೇಶದ ಅಧಿಕಾರ ವಲಯದಲ್ಲಿ ವಿಜೃಭಿಸುತ್ತಿರುವಾಗ ಅವರ ಮಧ್ಯೆ ಕ್ಯಾಪ್ಟನ್ ಲಕ್ಷ್ಮಿಯವರು ಆದರ್ಶ ಮಹಿಳಾ ನಾಯಕಿಯಾಗಿ ಶೋಭಿಸುತ್ತಾರೆ. ಅವರು ಮತ್ತು ಅವರಂತಹ ಹೋರಾಟಗಾರ್ತಿಯರೇ ಚುನಾವಣೆಗಳಲ್ಲಿ ಸ್ಪರ್ಧಿಸಿ ಗೆಲ್ಲಲಿ ಎಂಬುದು ಮಹಿಳಾ ಸಮುದಾಯದ ಅಭಿಲಾಷೆಯಾಗಬೇಕು.

★★★

## ಕ್ರೌರ್ಯದಿದಿರು ಮಾಯವಾಗುತ್ತಿರುವ ಅಂತಃಸಾಕ್ಷಿ

ಸಾವಿರಾರು ವರ್ಷಗಳ ಭವ್ಯ ಸಂಸ್ಕೃತಿಯ ತವರೂರು ಎಂದು ಹೇಳಿಕೊಳ್ಳುವ ಭಾರತ ಮತ್ತು ನೆರೆಯ ಪಾಕಿಸ್ಥಾನದ ದೇಶದಲ್ಲಿ ಹೆಣ್ಣಿನ ಬಗೆಗೆ ನಡೆಯುತ್ತಿರುವ ಚಿಂತನೆ, ಆಲೋಚನೆಗಳು ಮತ್ತು ಅವಳಿಗೆ ದೊರೆಯುತ್ತಿರುವ ಸಾಮಾಜಿಕ ನ್ಯಾಯ ತಲೆಕೆಳಗೆ ಮಾಡುವಂತಹ ನಾಚಿಕೆಗೇಡಿನ ಸಂಗತಿಯಾಗಿದೆ. ಮುಜಾಫರ್‌ಘರ್‌ನ ಪಾಕಿಸ್ಥಾನಿ ಮಹಿಳೆಯ ಮೇಲೆ ನಾಲ್ವರು ಪುರುಷರು ಸಾಮೂಹಿಕ ಅತ್ಯಾಚಾರ ನಡೆಸಿದರು. ಅವಳು ವಾಸಿಸುವ ಹಳ್ಳಿಯ ಪಂಚಾಯತಿಯು ಅವಳಿಗೆ ನೀಡಿದ ಶಿಕ್ಷೆಯಿದು. ಇದಕ್ಕೆ ಅವಳು ಮಾಡಿದ ಅಪರಾಧವೇನು ಗೊತ್ತೇ? ಅವಳಿಗಿಂತ ಮೇಲಿನ ಜಾತಿಗೆ ಸೇರಿದ ಹೆಂಗಸಿನೊಂದಿಗೆ ಅವಳ ಸೋದರ ಲೈಂಗಿಕಸಂಬಂಧವಿರಿಸಿಕೊಂಡಿದ್ದನೆಂಬುದಾಗಿದೆ. ಪುರುಷನೊಬ್ಬನ ಮೇಲ್ ಜಾತಿಯ ಹೆಣ್ಣಿನೊಂದಿಗೆ ಹೊಂದಿದ್ದ ಲೈಂಗಿಕ ಸಂಬಂಧಕ್ಕೆ ಶಿಕ್ಷೆ ಅವನ ಸೋದರಿಗೆ. ಅದೂ ಸಾಮೂಹಿಕ ಅತ್ಯಾಚಾರದ ಶಿಕ್ಷೆ. ಇದು ಯಾವ ಅರಣ್ಯ ನ್ಯಾಯ? ಅತ್ಯಂತ ನಾಚಿಕೆಗೆಟ್ಟ, ಘೋರ ಸಂಗತಿಯೆಂದರೆ ಆ ಹೆಣ್ಣು ಅನುಭವಿಸಿದ ಈ ಶಿಕ್ಷೆಯನ್ನು ಗೊತ್ತಿದ್ದೂ ನೂರಾರು ಜನ ಸುಮ್ಮನಿದ್ದರು.

ಮತ್ತೊಂದು ಘಟನೆ, ಕರ್ನಾಟಕದ ಕೋಲಾರ ಜಿಲ್ಲೆಯ ನಾಗಲಾಪಲ್ಲಿಯಲ್ಲಿ ಏಪ್ರಿಲ್ 26ರಂದು ದಲಿತ ಮಹಿಳೆ ಯಶೋದಮ್ಮನನ್ನು ಒಂಭತ್ತು ಮಂದಿ ಪುರುಷರು ಅಮಾನುಷವಾಗಿ ಹಿಂಸಿಸಿ ಅವಳ ದೇಹವನ್ನು ತುಂಡು ತುಂಡಾಗಿ ಕತ್ತರಿಸಿ ಚೆಲ್ಲಾಡಿದ್ದಾರೆ. ಇದಕ್ಕೆ ಅವಳು ಮಾಡಿದ ಅಪರಾಧವೆಂದರೆ, ಅವಳದೇ ಆಗಿದ್ದ ಒಂದು ಚಿಕ್ಕ ನೆಲವನ್ನು ಪ್ರಭಾವಿ ಶಕ್ತಿಗಳಿಗೆ ಮಾರಲು ಒಪ್ಪದಿದ್ದುದು. ಹಣ, ನೆಲ ಮತ್ತು ರಾಜಕೀಯ ಅಧಿಕಾರದಿಂದ ಬೀಗುತ್ತಿದ್ದ ಪ್ರಭಾವೀ ವ್ಯಕ್ತಿಯೊಬ್ಬರಿಗೆ ಅನಕ್ಷರಸ್ಥ ದಲಿತ ಹೆಣ್ಣುಮಗಳು ಯಶೋದಮ್ಮನ ದೃಢ ಸಂಕಲ್ಪ ಅಹಂಕಾರವಾಗಿ ಕಂಡಿರಬೇಕು. ಅದಕ್ಕೆ ಶಿಕ್ಷೆ ಅವಳ ಸಾವು. ಅದರಲ್ಲೂ ಅಮಾನುಷವಾದ ಪೈಶಾಚಿಕ ಕೊಲೆ. ಜೊತೆಗೆ ಅವಳ ಇಬ್ಬರು ಮಕ್ಕಳನ್ನೂ ಕೊಲೆ ಮಾಡಲಾಯಿತು. ಅವಸರವಸರವಾಗಿ ಪೋಸ್ಟ್ ಮಾರ್ಟಂ ಮಾಡಿ ಅವರ ಅಂತ್ಯಕ್ರಿಯೆಯ ನಾಟಕವೂ ಮುಗಿಯಿತು. ಈ ಕೊಲೆಯ ಹಿಂದಿನ ಶಕ್ತಿಗಳಿಗೆ ಇನ್ನೂ ಶಿಕ್ಷೆಯಾಗಿಲ್ಲ. ಸರ್ಕಾರದ ಖಡತದಲ್ಲಿ ಇದೂ ಒಂದು ದಲಿತರ ಮೇಲಿನ ದೌರ್ಜನ್ಯದ ಸಾಲಿಗೆ ಸೇರಿಹೋಯಿತು.

ರಾಜಕೀಯ ಶಕ್ತಿ ಮತ್ತು ಅಧಿಕಾರದ ಬಗ್ಗೆ ಮಾತುಗಳು ಕೇಳಿಬರುವ ಇಂದಿನ ದಿನಗಳಲ್ಲಿ ಯಾರದೋ ತಪ್ಪಿಗೆ ಯಾರೋ ಬಲಿಯಾಗುವ ಮತ್ತು ಕಣ್ಣೆದುರೇ ದೌರ್ಜನ್ಯ ನಡೆದಾಗಲೂ ಅದನ್ನು ನಿಲ್ಲಿಸದೇ ಮೂಕ ಸಾಕ್ಷಿಯಾಗುವ ಜನತೆಯ ಮನೋಸ್ಥೈರ್ಯ ಬದಲಾಗಬೇಕಿದೆ; ಮಾಯವಾಗಿರುವ ಅಂತಃಸಾಕ್ಷಿ ಮತ್ತೆ ಹುಟ್ಟಬೇಕಿದೆ.

**- ಎನ್. ಗಾಯತ್ರಿ**

# ಜಾಗತೀಕರಣದ ಹಿನ್ನೆಲೆಯಲ್ಲಿ ಪತ್ರಿಕೆಗಳು ಮತ್ತು ಮಹಿಳೆ

**- ಜಿ. ಎನ್. ಮೋಹನ್**

''ನಾನು ತಿಂಡಿಗೆ ಪತ್ರಿಕೆಗಳನ್ನೂ, ಊಟಕ್ಕೆ ಸ್ಯಾಟ್‌ಲೈಟ್ ಟಿವಿಯನ್ನೂ ತಿನ್ನುತ್ತೇನೆ'' ಎಂದು ಮಾಧ್ಯಮ ಸಾಮ್ರಾಟ ರೂಪರ್ಟ್ ಮುರ್ಡೋಕ್ ತಮ್ಮನ್ನು ಬಣ್ಣಿಸಿಕೊಂಡಿದ್ದಾರೆ.

ದಿನಕ್ಕೆ ಕನಿಷ್ಠ ಒಂದು ಪತ್ರಿಕೆ, ಎರಡು ಸ್ಯಾಟಲೈಟ್ ಟಿವಿಯಂತೆ ಮುರ್ಡೋಕ್ ಅವರು ಇದುವರೆಗೆ ಕಬಳಿಸಿರುವ ಹಾಗೂ ಇನ್ನು ಮುಂದೆ ಕಬಳಿಸಲಿರುವ ಮಾಧ್ಯಮಗಳು ಎಷ್ಟು ಎಂಬುದು ಗಾಬರಿ ಹುಟ್ಟಿಸುವ ಅಂಶ. ಮುರ್ಡೋಕ್ ಅವರ ಮಾತು ಖಂಡಿತಾ ಅವಾಸ್ತವದ ಲೆಕ್ಕಾಚಾರದಲ್ಲಿ ಎಂಬುದನ್ನು ಮುರ್ಡೋಕ್ ಹಾಕುತ್ತಿರುವ ಹೆಜ್ಜೆಗಳು ಸ್ಪಷ್ಟಪಡಿಸಿವೆ.

ರೂಪರ್ಟ್ ಮುರ್ಡೋಕ್ ಮಾತನಾಡಿದರೆ ಅದು ವಿಶ್ವದ ಮೂರನೇ ಎರಡು ಭಾಗಕ್ಕೆ ತಲುಪಿ ಅನುರಣನಗೊಳ್ಳುತ್ತದೆ. ಇದೇ ಪ್ರಪಂಚದಲ್ಲಿ ಮೂರನೇ ಒಂದು ಭಾಗ ಏನು ಓದಬೇಕು, ಏನು ಕೇಳಬೇಕು, ಏನು ನೋಡಬೇಕು, ಏನು ಯೋಚಿಸಬೇಕು ಎಂಬುದು ಈಗ ಮುರ್ಡೋಕ್ ಅವರ ಕೈಯಲ್ಲಿದೆ.

ಪ್ರಪಂಚದಾದ್ಯಂತ ಶೇ 52ರಷ್ಟು ಮಂದಿ ನೋಡುತ್ತಿರುವ ಟಿವಿ ಕಾರ್ಯಕ್ರಮಗಳಲ್ಲಿ ಒಂದು ಮುರ್ಡೋಕ್ ಅವರದ್ದು ಇಂಗ್ಲಿಷ್ ಪತ್ರಿಕೆ ಓದುವವರ ಪೈಕಿ ಶೇ. 19 ಮಂದಿ ಒಂದಲ್ಲಾ ಒಂದು ಮುರ್ಡೋಕ್ ಪತ್ರಿಕೆ ಓದುತ್ತಿರುತ್ತಾರೆ. ರೇಡಿಯೋ ತಿರುಗಿಸಿದರೆ ಮುರ್ಡೋಕ್, ನೋಡುತ್ತಿರುವ ಚಲನಚಿತ್ರ ಮುರ್ಡೋಕ್ ಕಂಪ್ಯೂಟರ್‌ನಲ್ಲಿ ಮುರ್ಡೋಕ್, ಓದುತ್ತಿರುವ ಪುಸ್ತಕದಲ್ಲಿ ಮುರ್ಡೋಕ್, ಹೀಗೆ ಎಲ್ಲೆಡೆ ಮುರ್ಡೋಕ್, ಮುರ್ಡೋಕ್.

ಮುರ್ಡೋಕ್ ಅವರನ್ನು ಬಣ್ಣಿಸಲು ಬೇಕಾಗಿರುವುದು ಶಬ್ದವಲ್ಲ, ಅಂಕಿಅಂಶಗಳು ಎನ್ನುವಷ್ಟರ ಮಟ್ಟಿಗೆ ಮುರ್ಡೋಕ್ ಜಗತ್ತಿನ ಮಾಧ್ಯಮಗಳನ್ನು ತಮ್ಮ ಹಿಡಿತದಲ್ಲಿ ಹೊಂದಿದ್ದಾರೆ. ದಿನಕ್ಕೆ ಒಂದು ಪತ್ರಿಕೆ ಎರಡು ಸ್ಯಾಟಲೈಟ್ ಟಿವಿ ಇವರ ಪಟ್ಟಿಯಲ್ಲಿ ಸೇರುತ್ತಲೇ ಇದೆ. ಜಾಗತೀಕರಣದ ಸಂಪೂರ್ಣ ಪ್ರಯೋಜನ ಪಡೆದಿರುವ ಮುರ್ಡೋಕ್ ಈವರೆಗೂ ಇಲ್ಲದ ಹೊಸ ಮಾರುಕಟ್ಟೆಗಳನ್ನು ತಮ್ಮ ಹಿಡಿತಕ್ಕೆ ತೆಗೆದುಕೊಳ್ಳಲು ಎಲ್ಲ ಪ್ರಯತ್ನ ನಡೆಸಿದ್ದಾರೆ. ಹೊಸ ಹೊಸ ದೇಶಗಳು ಇವರ ಮಾಧ್ಯಮ ಸರಣಿಯಲ್ಲಿ ಒಂದಾಗುತ್ತಿರುವಂತೆಯೇ ವಿಶ್ವದ ಮೂರನೇ ಎರಡು ಭಾಗವಲ್ಲ. ಇಡೀ ವಿಶ್ವ ಮುರ್ಡೋಕ್ ಅವರ ಮಾತನ್ನು ಕೇಳಬೇಕಾಗುವತ್ತ ಹೆಜ್ಜೆ ಹಾಕುತ್ತಿದೆ. ಮುರ್ಡೋಕ್, ಅಂತೆಯೇ ಅವನಂತಹ ಹಲವು ಮಾಧ್ಯಮ ದೊರೆಗಳು ಭಾರತದ ಬಾಗಿಲನ್ನು ತಟ್ಟುತ್ತಿದ್ದಾರೆ.

ನೂತನ ಆರ್ಥಿಕ ನೀತಿ ಎಂಬ ಮಂತ್ರದಂಡದೊಂದಿಗೆ ದಿಢೀರನೆ ವಿಶ್ವದ ಮಾರುಕಟ್ಟೆಯಲ್ಲಿ ಭಾರತವನ್ನು ಒಂದಾಗಿಸುವ ಹುಂಬ ಕನಸು ಹಲವು ಬಿಕ್ಕಟ್ಟುಗಳನ್ನು ಎಲ್ಲಾ ಕ್ಷೇತ್ರಗಳಲ್ಲಿಯೂ ಹುಟ್ಟುಹಾಕಿದೆ. ಇಂತಹ ತಲ್ಲಣಗಳು ಮಾಧ್ಯಮ ಕ್ಷೇತ್ರವನ್ನೂ ಬಿಡಲಿಲ್ಲ. ಭಾರತದ ಜಾಗತೀಕರಣ ಹಿನ್ನೆಲೆಯಲ್ಲಿ ಭಾರತದ ಪತ್ರಿಕಾ ರಂಗವೂ ಹೊರಳುದಾರಿಯಲ್ಲಿದೆ. ಭಾರತೀಯ ಪತ್ರಿಕೆಗಳು ಪೆಪ್ಸಿ, ಕೋಕಾಕೋಲಾದಂತೆ, ಟೂತ್‌ಪೇಸ್ಟ್, ಪೊಟಾಟೋ ಚಿಪ್ಸ್‌ನಂತೆ ಒಂದು ಸರಕಾಗಿಸಿಬಿಡುವ ಬೃಹತ್ ಹುನ್ನಾರ ನಡೆಯುತ್ತಿದೆ.

ಮುಂದುವರಿದ ದೇಶಗಳು ಮತ್ತು ಮೂರನೇ ಜಗತ್ತಿನ ದೇಶಗಳ ನಡುವೆ ನಡೆಯುತ್ತಿರುವ ಮಾಹಿತಿ ವಿನಿಮಯದ ಬಗ್ಗೆ ಪರಿಶೀಲನೆ ನಡೆಸಲು ಯುನೆಸ್ಕೋ ಖ್ಯಾತ ನೊಬೆಲ್ ಪ್ರಶಸ್ತಿ ಮ್ಯಾಕ್‌ಬ್ರೈಡ್ ನೇತೃತ್ವದಲ್ಲಿ ಒಂದು ಆಯೋಗವನ್ನು ರಚಿಸಿತು.

ಈ ಆಯೋಗ ಸ್ಟಾಕ್ ಹೋಂನಲ್ಲಿ ಹಮ್ಮಿಕೊಂಡಿದ್ದ ಅಂತರರಾಷ್ಟ್ರೀಯ ವಿಚಾರ ಸಂಕಿರಣ ಒಂದು ಮಹತ್ವದ ವಿಚಾರದ ಮೇಲೆ ಬೆಳಕು ಚೆಲ್ಲಿತು. ವಿಶ್ವದ ಬಹುತೇಕ ಎಲ್ಲಾ ದೇಶಗಳ ಮಾಧ್ಯಮ ಪ್ರತಿನಿಧಿಗಳು ಸೇರಿದ್ದ ಈ ಸಂಕಿರಣದಲ್ಲಿ ಮೂರನೇ ಜಗತ್ತಿನ ರಾಷ್ಟ್ರಗಳ ಪ್ರತಿನಿಧಿಗಳು 'ಮಾಧ್ಯಮ ಸಮಾಜ ಬದಲಾವಣೆಗಾಗಿ ಇರುವ ಸಾಧನ' ಎಂದು ಅಭಿಪ್ರಾಯ ಪಟ್ಟರೆ ಮುಂದುವರಿದ ದೇಶಗಳ ಪ್ರತಿನಿಧಿಗಳು 'ಮಾಧ್ಯಮ ಎಂಬುದು ಮಾರುಕಟ್ಟೆಯ ಅಗತ್ಯಕ್ಕೆ ಪೂರಕವಾಗಿರುವ ಸಾಧನ'' ಎಂದು ಅಭಿಪ್ರಾಯಪಟ್ಟರು.

ಜಾಗತೀಕರಣದ ಹಿನ್ನೆಲೆಯಲ್ಲಿ ಭಾರತದ ಸಂಪದ್ಭರಿತ ಮಾರುಕಟ್ಟೆಯನ್ನು ಮುಕ್ತಗೊಳಿಸುವುದರೊಂದಿಗೆ ಮುಂದುವರಿದ ದೇಶಗಳು ಹಾಗೂ ಮೂರನೇ ಜಗತ್ತಿನ ರಾಷ್ಟ್ರಗಳ ಈ ಆಲೋಚನೆಯ ನಡುವೆ ಸಂಘರ್ಷ ಆರಂಭವಾಗಿದೆ. ಈ ಎರಡೂ ಜಗತ್ತುಗಳ ನಡುವೆ ಇರುವ ಅಪಾರ ಅಂತರ ಭಾರತದ ಕನಸುಗಳ ಮೇಲೆ ನಡೆಸುತ್ತಿರುವ ದಾಳಿಯಾಗಿ ಬದಲಾಗಿದೆ. ಅಭಿವೃದ್ಧಿಯ ಪಥದಲ್ಲಿ ಸಾಗಲು ಮಾಧ್ಯಮ ಒಂದು ಊರುಗೋಲು ಎಂಬ ಆಲೋಚನೆಗಳು ಈಗ ಮಾರುಕಟ್ಟೆಯ ದಾಳಿಯಲ್ಲಿ ಸಿಕ್ಕಿದೆ.

ಮ್ಯಾಕ್‌ಬ್ರೈಡ್ ಆಯೋಗ ಪ್ರತಿಯೊಂದು ದೇಶವೂ ತಾನು ಅಭಿವೃದ್ಧಿ ಹೊಂದಬೇಕಾದರೆ ಒಂದು ಮಾಧ್ಯಮನೀತಿಯನ್ನು ಹೊಂದಬೇಕಾದ ಅವಶ್ಯಕತೆಯನ್ನು

ಸಾರಿ ಹೇಳಿತ್ತು. ''ಮಾಧ್ಯಮ ನೀತಿ ದೇಶದ ಪ್ರತಿಯೊಬ್ಬರೂ ಅದು ಪುರುಷನಿರಲಿ ಮಹಿಳೆಯಿರಲಿ, ಶ್ರೀಮಂತನಿರಲಿ - ಬಡವನಿರಲಿ ಒಂದೇ ಎಂಬ ವಾತಾವರಣವನ್ನು ಹುಟ್ಟುಹಾಕುತ್ತದೆ. ದೇಶ ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಆರ್ಥಿಕವಾಗಿ ಅಭಿವೃದ್ಧಿ ಹೊಂದಲು ತನ್ನ ಮಾಧ್ಯಮ ಸಂಪನ್ಮೂಲಗಳನ್ನು ಬಳಸಿಕೊಳ್ಳಲು ಮಾಧ್ಯಮನೀತಿ ಅವಕಾಶ ನೀಡುತ್ತದೆ.''

ಮೂರನೇ ಜಗತ್ತಿನ ರಾಷ್ಟ್ರಗಳಿಗೆ ಮಾಧ್ಯಮ ಎಂಬುದು ಇನ್ನೂ ಮಹತ್ವದ ವಿಷಯ ಎಂದು ಆಯೋಗ ಅಭಿಪ್ರಾಯ ಪಟ್ಟಿದೆ. ''ಅನಕ್ಷರತೆ, ಅಸಮಾನತೆ, ನಿರುದ್ಯೋಗದಂತಹ ಸಮಸ್ಯೆಯನ್ನು ನಿವಾರಿಸಿಕೊಂಡು, ಸಾಮಾಜಿಕ ಆರ್ಥಿಕ ಪ್ರಗತಿ ಸಾಧಿಸಲು, ಸಾಮಾಜಿಕ ನ್ಯಾಯ ಒದಗಿಸಲು ಗ್ರಾಮ ಮತ್ತು ನಗರದ ಮಧ್ಯೆ ಇರುವ ಅಂತರವನ್ನು ಇಲ್ಲವಾಗಿಸಲ್ಲಿ ಮಾಧ್ಯಮಗಳ ಪಾತ್ರ ಅತ್ಯಂತ ಮಹತ್ವದ್ದು ಎನ್ನುತ್ತದೆ ಆಯೋಗ.

ಪುರುಷ ಮತ್ತು ಮಹಿಳೆಯ ನಡುವಿನ ಅಸಮಾನತೆಯನ್ನು, ಬಡವ-ಬಲ್ಲಿದ ಎಂಬ ಭೇದವನ್ನು ನಗರ ಮತ್ತು ಗ್ರಾಮದ ಮಧ್ಯೆ ಇರುವ ಕಂದರವನ್ನು ಮುಚ್ಚಬೇಕಾದ ಪತ್ರಿಕೆಗಳು ಇಂದು ಮಾರುಕಟ್ಟೆಯ ದಾಳಿಯಿಂದ-ತಬ್ಬಿಬ್ಬಾಗಿದೆ. (ಪತ್ರಿಕೆಗಳ ವ್ಯಾಪಕ ಪ್ರಚಾರದಿಂದ ಒಂದು ಹಳ್ಳಿಗೆ ಬಂದ ರಸ್ತೆ ಹೇಗೆ ಇಡೀ ಹಳ್ಳಿಯನ್ನೇ ಬದಲಾಯಿಸಿತು ಎಂಬ ಚಿತ್ರವನ್ನು ನಮ್ಮ ಮುಂದಿದೆ) ದೇಶ ಕಟ್ಟುವ ಕ್ರಿಯೆ ಇನ್ನೂ ಸಂಪೂರ್ಣವಾಗದಿರುವಾಗಲೇ ಪತ್ರಿಕೆಗಳನ್ನು ಮಾರುಕಟ್ಟೆ ಬೆಳೆಸಲು ಕಳಿಸಿಕೊಡಬೇಕಾಗಿ ಬಂದಿದೆ. ಭಾರತದ ಎಲ್ಲಾ ಕ್ಷೇತ್ರಗಳನ್ನೂ ಆವರಿಸುತ್ತಿರುವ ಬಲಾಢ್ಯ ದೇಶಗಳ ದೃಷ್ಟಿಕೋನ ಈಗ ಪತ್ರಿಕಾರಂಗಕ್ಕೂ ಹೆಜ್ಜೆಹಾಕಿದ್ದು ಪತ್ರಿಕೆಯನ್ನು ಸರಕನ್ನಾಗಿಸಿದೆ.

ಭಾರತದಲ್ಲಿ ಪತ್ರಿಕೆಗಳ ಪ್ರವೇಶಕ್ಕೆ ಇರುವ ಕಾನೂನುಗಳನ್ನು ನಿರಾಕರಿಸಿ ವಿದೇಶಿ ಪತ್ರಿಕೆಗಳು ಸರಕು ಕಾಯಿದೆಗಳ ಮೂಲಕ ಭಾರತವನ್ನು ಪ್ರವೇಶಿಸುತ್ತಿವೆ. ಟ್ರೇಡ್ ಅಂಡ್ ಮರ್ಚಂಟೈಸ್ ಮಾರ್ಕ್ಸ್ ಆ್ಯಕ್ಟ್ 1958 ಮೂಲಕ ಪೆಪ್ಸಿ ಹಾಗೂ ಕೋಕಾ ಕೋಲಾ ಭಾರತವನ್ನು ಪ್ರವೇಶಿಸುತ್ತದೆ. ಆದರೆ ಅದೇ ಕಾಯಿದೆಯನ್ನೇ ಬಳಸಿ ಪತ್ರಿಕೆಗಳು (ಲಂಡನ್‌ನ ಫೈನಾನ್ಸಿಯಲ್ ಟೈಮ್ಸ್) ಭಾರತಕ್ಕೆ ಲಗ್ಗೆ ಹಾಕಿದೆ. ವಾರ್ತಾ ಮತ್ತು ಪ್ರಸಾರ ಸಚಿವಾಲಯವನ್ನು ಲೆಕ್ಕಕ್ಕೇ ತೆಗೆದುಕೊಳ್ಳದೆ ವಾಣಿಜ್ಯ ಸಚಿವಾಲಯದ ಮೂಲಕ ಪತ್ರಿಕೆಗಳು ತಮ್ಮನ್ನು ಸರಕು ಎಂದು ಘೋಷಿಸಿಕೊಂಡು ಭಾರತ ಪ್ರವೇಶಿಸಲು ಹಕ್ಕೊತ್ತಾಯವನ್ನು ಮಂಡಿಸಿವೆ.

ಭಾರತ ಡಂಕೆಲ್ ಪ್ರಸ್ತಾವನೆಗೆ ಸಹಿ ಹಾಕಿರುವುದರಿಂದ ಆ ಮೂಲಕ ಗ್ಯಾಟ್ ಅಂತಿಮ ಒಪ್ಪಂದದ ಭಾಗೀದಾರನಾಗಿರುವುದರಿಂದ ನಮ್ಮ ಪತ್ರಿಕೆಯನ್ನು ಸರಕು ನೊಂದಣಿ ಕಾಯಿದೆ ಮೂಲಕ ನೊಂದಾಯಿಸುವುದು ಸರಿಯಾಗಿಯೇ ಇದೆ ಎನ್ನುತ್ತಾರೆ. (ಈ ಪತ್ರಿಕಾ ಫೈನಾನ್ಸಿಯಲ್ ಟೈಮ್ಸ್) ಅಧಿಕಾರಿಗಳು ಪತ್ರಿಕೆ ಎಂಬುದು ಇವರ ಪ್ರಕಾರ ಒಂದು ಬ್ರಾಂಡ್ ಮಾತ್ರ.

ಡಂಕೆಲ್ ಪ್ರಸ್ತಾವಣೆಯ ಅಂತಿಮ ನಿರ್ಣಯ ಸುದ್ದಿ ಸೇವೆಯನ್ನು ವ್ಯಾಪಾರ ಸಂಬಂಧಿ ಸೇವೆ ಎಂದೇ ಪರಿಗಣಿಸಿದೆ. ಸುದ್ದಿಯ ಮೇಲೆ ಬೌದ್ಧಿಕ ಆಸ್ತಿ ಹಕ್ಕನ್ನು ಹೇರುವ ಕಾಲವೂ ದೂರ ಇಲ್ಲ.

ಬಲಾಢ್ಯ ದೇಶಗಳು ಗ್ಯಾಟ್ ಒಪ್ಪಂದದ ಮೂಲಕ ಸಿನಿಮಾವನ್ನು ಒಂದು ಕಂಪನಿಯ ಸಿನಿಮಾ ಆಗಿ, ಸಾಹಿತ್ಯವನ್ನು ಒಂದು ಕಂಪನಿಯ ಸಾತ್ಯವಾಗಿಸಿದಂತೆ, ಪತ್ರಿಕೋದ್ಯಮವನ್ನು ಒಂದು ಕಂಪನಿಯ ಪತ್ರಿಕೋದ್ಯಮವಾಗಿಸಿದೆ. ಆ ಮೂಲಕ ತನ್ನ ಸರಕಿನ ಆಲೋಚನೆಯನ್ನು ಎಲ್ಲಾ ದೇಶಗಳ ಮೇಲೆ ಹೇರುವ ಪ್ರಯತ್ನ ನಡೆಸಿದೆ.

ಈ ಸರಕು ಸಂಸ್ಕೃತಿಯನ್ನೇ ಫ್ರಾನ್ಸ್ ನಿಮ್ಮ ಆಲೋಚನೆಗಳು ನಿಮ್ಮ ಬಳಿಯೇ ಇರಲಿ ಎಂದು ಸ್ಪಷ್ಟವಾಗಿ ತಿರಸ್ಕರಿಸಿದೆ. ಜಾಗತೀಕರಣಗೊಂಡ ಮಾತ್ರಕ್ಕೆ ಬಾಗಿಲು ಬಡಿಯುವ ಯಾವುದೇ ಪತ್ರಿಕಾ ಸಂಸ್ಥೆಗಳಿಗೆ ಬಾಗಿಲು ತೆರೆಯಬೇಕೆನ್ನುವ, ಅಮೇರಿಕಾ ಹೊತ್ತುಹಾಕುವ ಎಲ್ಲಾ ಹಾಲಿವುಡ್ ಚಿತ್ರಗಳಿಗೂ ಬೆಳಕು ಕಾಣಿಸಬೇಕೆನ್ನುವ ವಾದವನ್ನು ಫ್ರಾನ್ಸ್ ವಿರೋಧಿಸಿದೆ.

ಸಿನಿಮಾ ಒಂದು ವ್ಯಾಪಾರಿ ಸರಕಾದರೆ ಅದು ವ್ಯಾಪಾರದ ಸಕಲ ನಿಯಮಗಳಿಗೆ ಪಕ್ಕಾಗಬೇಕು. ಅಮೇರಿಕಾ ಸಿನಿಮಾವನ್ನು ಒಂದು ಸರಕಾಗಿ ನೊಡುತ್ತದೆ. ಆದರೆ ನಮ್ಮದು ಅದಕ್ಕಿಂತ ಭಿನ್ನವಾದ ಯೋಚನೆ. ಸಿನಿಮಾ ನಮ್ಮ ದೇಶಗಳ ವೈಶಿಷ್ಟದ ಅಭಿವ್ಯಕ್ತಿ ಎನ್ನುತ್ತಾರೆ. ಪೋಲಂಡ್‌ನ ಖ್ಯಾತ ಚಿತ್ರ ನಿರ್ದೇಶಕ ಝನುಸಿ.

ಅಮೇರಿಕಾಗೆ ಇಂದು ಸಿನಿಮಾ ಎನ್ನುವುದು ಒಬ್ಬ ನಿರ್ದೇಶಕನ ಸಿನಿಮಾ ಎನ್ನುವುದಕ್ಕಿಂತ ಒಂದು ಕಂಪನಿಯ ಸಿನಿಮಾ. ಪ್ರತಿಯೊಬ್ಬ ಸೃಜನಶೀಲ ವ್ಯಕ್ತಿಯ ಹಿಂದೆಯೂ ಒಂದು ಕಮಿಟಿ ಇರುತ್ತದೆ. ಇಂದು ಅತಿಹೆಚ್ಚು ಮಾರಾಟವಾಗುವ ಕಾದಂಬರಿಯ ಹಿಂದೆ ಒಬ್ಬ ಕಾದಂಬರಿಕಾರನಲ್ಲ, ಒಂದು ಕಮಿಟಿ ಇರುತ್ತದೆ. ಕಾದಂಬರಿಕಾರ ಕಾದಂಬರಿ ಬರೆದ ನಂತರ ಜನರನ್ನು ತಿಳಿಸುವ ರೀತಿಗಳು ಯಾವುವು ಎಂದು ಚರ್ಚಿಸಿ ತಿದ್ದುಪಡಿ ಮಾಡಿ ಪ್ರಕಟಿಸುವುದು ಆ ಒಂದು ಕಮಿಟಿ ಎನ್ನುತ್ತಾರೆ. ಝನೂಸಿ.

ಈಗ ಪತ್ರಿಕೆಯ ಸರದಿ. ಪತ್ರಿಕೆ ಒಂದು ಕಂಪನಿಯ ಸರಕಾಗಿ ಬದಲಾಗುತ್ತಿದೆ. ಜಾಗತೀಕರಣದಿಂದ ಪತ್ರಿಕೋದ್ಯಮಕ್ಕೆ ಇದುವರೆಗೂ ಇದ್ದ ವ್ಯಾಖ್ಯಾನ ಬದಲಾಗಿ 'ನವ ಪತ್ರಿಕೋದ್ಯಮ'ವೊಂದು ತಲೆ ಎತ್ತುತ್ತಿದೆ.

ಪತ್ರಿಕೆ ಎಂಬುದ ಇತರ ಎಲ್ಲ ವಸ್ತುಗಳಂತೆಯೇ ಮಾರುಕಟ್ಟೆಯಲ್ಲಿರುವ ವಸ್ತು ಎಂದು ಭಾವಿಸಿದ್ದೇ ತಡ ಪತ್ರಿಕೋದ್ಯಮದ ಸ್ಥಿತಿಯೇ ಬದಲಾಗತೊಡಗಿತು. ಪತ್ರಿಕೆ ಇತರ ಸರಕುಗಳಂತೆ ಬೇಕಾದಾಗ ಬ್ರ್ಯಾಂಡ್‌ಗಳನ್ನು ಪರಿಚಯಿಸುವ, ಬೇಡದಿದ್ದರೆ ಮಾರುಕಟ್ಟೆಯಿಂದ ಹಿಂದಕ್ಕೆ ತೆಗೆದುಕೊಳ್ಳುವ, ಅಗತ್ಯವಿದ್ದರೆ ಬ್ರ್ಯಾಂಡ್‌ನ್ನೇ ಬದಲಾಯಿಸಿಬಿಡುವ, ಮಾರುಕಟ್ಟೆಯ ಮನಸ್ಥಿತಿ ನೋಡಿಕೊಂಡು ಬೆಲೆ ಏರಿಸುವ, ಇಳಿಸುವ, ಒಂದಕ್ಕೆ ಇನ್ನೊಂದನ್ನು ಉಚಿತವಾಗಿ ನೀಡುವ, ಬಂಪರ್ ಬಹುಮಾನ ನೀಡುವ ವಸ್ತುವಾಗಿ ಬದಲಾಯಿತು.

ಪತ್ರಿಕೆ ಒಂದು ಸರಕಾಗುತ್ತಿದ್ದಂತೆ ಸರಕಿನ ಗುಣಮಟ್ಟಕ್ಕಿಂತ ಅದನ್ನು ಬಿಕರಿ ಮಾಡುವುದೇ ಮುಖ್ಯವಾಯಿತು. ಪತ್ರಿಕೆಯ ಒಳಗೇನಿದೆ ಎನ್ನುವುದಕ್ಕಿಂತ ಅದನ್ನು ಹೇಗಾದರೂ ಓದುಗನ ಕೈಗೆ ದಾಟಿಸುವುದೇ ಮುಖ್ಯವಾಯಿತು. ಇದರಿಂದಾಗಿ ಅದುವರೆಗೂ ಇದ್ದ ಪತ್ರಿಕೋದ್ಯಮದ ನಂಬಿಕೆಗಳೇ ಅಲುಗಾಡಲು ಆರಂಭವಾಯಿತು. ಪತ್ರಿಕೆಯ ಪ್ರಧಾನ ಅಂಗ ಸಂಪಾದಕೀಯ ವಿಭಾಗದ ಪ್ರಾಮುಖ್ಯತೆ ಕ್ರಮೇಣ ಕಡಿಮೆಯಾಗಿ ಪತ್ರಿಕೆ ಮಾರಾಟ ಮಾಡುವ ಪ್ರಸರಣ ಅಥವಾ ಮಾರುಕಟ್ಟೆ ವಿಭಾಗ ಮೇಲುಗೈ ಪಡೆಯಿತು.

ದೇಶವನ್ನು ರೂಪಿಸಬೇಕಾದ ನಾಲ್ಕನೆಯ ಅಂಗ ಕೇವಲ ಜಾಹಿರಾತುಗಳತ್ತ ಕಣ್ಣಿಟ್ಟ ಒಂದು ಉದ್ಯಮ ಮಾತ್ರವಾಯಿತು. ಪತ್ರಕರ್ತ ಜಾಹಿರಾತುಗಳ ನಡುವಿನ ಖಾಲಿಸ್ಥಾನ ತುಂಬುವ ವ್ಯಕ್ತಿಯಾದ.

"ಕೋಲ್ಗೇಟ್ ಟೂತ್‌ಪೇಸ್ಟನ್ನು ಪೆಪ್ಸೋಡೆಂಟ್‌ನೊಂದಿಗೆ ಹೋಲಿಸಿದರೆ ಗುಣದಲ್ಲಿ ಅಂತ ಮಹಾ ವ್ಯತ್ಯಾಸವೇನೂ ಕಾಣುವುದಿಲ್ಲ. ಆದರೂ ಸಹ ಕೋಲ್ಗೇಟ್ ಟೂತ್‌ಪೇಸ್ಟ್ ಮಾರುಕಟ್ಟೆಯಲ್ಲಿ ಅಗ್ರಸ್ಥಾನ ಹೊಂದಿಗೆ. ಪೆಪ್ಸೋಡೆಂಟ್ ಸಣ್ಣ ಪಾಲನ್ನು ಹೊಂದಿದೆ. ಹಾಗೆಯೇ ಪತ್ರಿಕೆಯ ಗುಣಮಟ್ಟಕ್ಕಿಂತ ಮಾರುಕಟ್ಟೆ ಮಾತ್ರವೇ ಲಾಭ ತಂದುಕೊಡಲು ಸಾಧ್ಯ ಎಂಬ ಆಲೋಚನೆಗಳು ಚಲಾವಣೆಗೆ ಬರತೊಡಗಿತು. ಪತ್ರಿಕೆ ಮಾರುಕಟ್ಟೆಯ ಸೂತ್ರಗಳಾಗಿ ಮೊರೆಹೋಯಿತು. ಪತ್ರಿಕೆ ಎಂಬುದು ವೃತ್ತಿಯಾಗದೆ ಸ್ಪರ್ಧೆಯಾಗಿ ಬದಲಾಯಿತು. ಪತ್ರಿಕೆಗಳಿಗೆ ಲಾಭ ಕೊಡುವ ಜಾಹೀರಾತುಗಳು ಮುಖ್ಯವಾದವು.

ಜಾಹಿರಾತು ಮತ್ತು ಪತ್ರಿಕೆಯ ಪ್ರಸಾರಕ್ಕೆ ನಿಕಟ ಸಂಬಂಧವಿದೆಯೇ ಹೊರತು ಪತ್ರಿಕೆಯ ಗುಣಮಟ್ಟ ಮಾರುಕಟ್ಟೆಸ್ಪರ್ಧೆಗೆ ಗಣ್ಯ ಎನ್ನುವಂತಾಯಿತು. ಹೇಗಾದರೂ ಮಾಡಿ ಮಾರುಕಟ್ಟೆಯಲ್ಲಿ ಮೊದಲ ಸ್ಥಾನಗಳಿಸುವ ಆ ಮೂಲಕ ಎಲ್ಲಾ ಜಾಹಿರಾತುಗಳನ್ನು ಸೆಳೆಯುವ ಸ್ಪರ್ಧೆ ಆರಂಭವಾಯಿತು. ಕೊಳ್ಳು ಶಕ್ತಿಯುಳ್ಳ ಓದುಗನನ್ನು ಯಾವ ಪತ್ರಿಕೆ ಮುಟ್ಟುತ್ತದೋ ಅಂತಹ ಪತ್ರಿಕೆಗಳಿಗೆ ಮಾತ್ರ ಜಾಹೀರಾತು ಸೇರತೊಡಗಿದೆ. ಪತ್ರಿಕೆಗಳು ಗುಣಕ್ಕೆ ವಿದಾಯ ಹೇಳಿದವು. ಪತ್ರಿಕೋದ್ಯಮ ಓದುಗನನ್ನು ಕೈಬಿಟ್ಟು ಕೊಳ್ಳುವ ಗ್ರಾಹಕನ ಬೆನ್ನು ಹತ್ತಿತು.

ದಿಢೀರನೆ ಮಾರುಕಟ್ಟೆಯಲ್ಲಿ ಒಂದನೇ ಸ್ಥಾನಗಿಟ್ಟಿಸುವ ಯಕ್ಷಿಣಿ ಸಾಧಿಸಲು ಪತ್ರಿಕೆಗಳ ಮುಂದಿದ್ದದ್ದು ಸೆಕ್ಸ್ ಮತ್ತು ಹಿಂಸೆ ಎಂಬ ಮಂತ್ರಮಾತ್ರ.

ಪತ್ರಿಕೋದ್ಯಮ ಇಂದು ಒಂದು ಕಂಪನಿ ನಡೆಸುವ ಪತ್ರಿಕೋದ್ಯಮವಾದ ಕಾರಣದಿಂದಲೇ ಹಣ ಹೂಡಿದ ಕಂಪನಿ ತನ್ನ ಬಂಡವಾಳ ಲಾಭವಾಗುವುದನ್ನು ಮಾತ್ರ ನಿರೀಕ್ಷಿಸುತ್ತದೆ. ಸಿನಿಮಾ ಮತ್ತು ಸಾಹಿತ್ಯ ಕಂಪನಿಗಳ ಹಿಡಿತದಲ್ಲಿ ಹೇಗೆ ಲಾಭ ತರುವ ಫುಲ್ ಆಫ್ ಸೆಕ್ಸ್ ಅಂಡ್ ವೈಲನ್ಸ್ (ನೊಬೆಲ್ ಪ್ರಶಸ್ತಿ ವಿಜೇತೆ ಟೋನಿ ಮಾರಿಸನ್ ಅವರ ಕೃತಿಗಳನ್ನು ಪ್ರಕಟಿಸಿದಾಗ ಅದನ್ನು ಈ ಕಂಪನಿಗಳು ಪ್ರಚಾರ ಮಾಡಿದ ರೀತಿ) ಕೃತಿಗಳಾಗಿ ಬದಲಾದವೋ, ಅಂತೆಯೇ ಈಗ ಪತ್ರಿಕೋದ್ಯಮ ಕೂಡಾ 'ಸೆಕ್ಸ್ ಮತ್ತು ಹಿಂಸೆಯಿಂದ ಕೂಡಿದ' ಪತ್ರಿಕೋದ್ಯಮವಾಗಿ ಬದಲಾಗುವತ್ತ ದಾಪುಗಾಲು ಹಾಕುತ್ತಿದೆ.

ಮಹಿಳೆಯನ್ನು ತುಚ್ಚೀಕರಿಸುವ, ಭೋಗದ ವಸ್ತುವನ್ನಾಗಿ ನೋಡುವ ಪಾಠವನ್ನು 'ಮುರ್ಡೋಕ್ ಪತ್ರಿಕೋದ್ಯಮ' ಕಲಿಸಿತು. ಮುರ್ಡೋಕ್ ಕೊಂಡ ಪತ್ರಿಕೆಗಳ ಮೂರನೇ ಪುಟ ಬಿಕಿನಿ ತೊಟ್ಟ, ಅದೂ ಇಲ್ಲದ ಮಹಿಳೆಯರ ಚಿತ್ರವನ್ನು ಹೊತ್ತು ಬರಲಾರಂಭಿಸಿದವು. ರೂಪರ್ಟ್ ಮುರ್ಡೋಕ್ ಯಾವ ದೇಶದಲ್ಲಿ ಯಾವ ಪತ್ರಿಕೆಯನ್ನು ಕೊಂಡಿದ್ದಾರೆ ಎಂಬುದಕ್ಕೆ ಆ ಪತ್ರಿಕೆಗಳ ಮೂರನೇ ಪುಟವೇ ಸಾಕ್ಷಿಯಾಯಿತು. ಮೂರನೇ ಪುಟ ಪತ್ರಿಕೋದ್ಯಮ ಆರಂಭವಾಯಿತು.

ಮೂರನೇ ಪುಟದಿಂದ ಮಾತ್ರವೇ ಲಾಭ ಎನ್ನುವಂತಾದ ಮುರ್ಡೋಕ್ ಈ ಪುಟಗಳನ್ನು ಇನ್ನೂ ರಂಜನೀಯವಾಗಿಸಲೂ ಪ್ರಯತ್ನಿಸಿದರು. ಮೊದಲು ಈ ಪುಟಕ್ಕೆ ಮಾತ್ರ ಮೀಸಲಾಗಿತ್ತು. ಹಿಂಸೆ, ಸೆಕ್ಸ್ ನಂತರ ಧಾರಾಳವಾಗಿ ಮೊದಲ ಪುಟದಿಂದ ಕೊನೆಯ ಪುಟದವರೆಗೆ, ಮೊದಲ ಕಾಲಂನಿಂದ ಕೊನೆಯ ಕಾಲಂವರೆಗೆ ಹರಡಿಕೊಂಡಿತು.

ಡೈಲಿ ಸ್ಪೋರ್ಟ್ ಪತ್ರಿಕೆ ಮುಖಪುಟದ ತುಂಬಾ ನಗ್ನ ಹುಡುಗಿಯರ ಚಿತ್ರವನ್ನು ಪ್ರಕಟಿಸಿದರೆ ಗಾರ್ಡಿಯನ್‌ಗೆ ಸೆಕ್ಸಿ ಪಟ ಬಳಸುವುದು ಈಗ ಮುಜುಗುರದ ವಿಷಯವಲ್ಲ. ನ್ಯೂಸ್ ಆಫ್ ದಿ ವರ್ಲ್ಡ್‌ಗೆ ಅಪರಾಧ ಸುದ್ದಿಗಳ ಹೆಸರಲ್ಲಿ ರಂಜಿತ ಸುದ್ದಿ ಪ್ರಕಟಿಸುವುದು ಬೆತ್ತಲೆ ಹುಡುಗಿಯನ್ನು ಪ್ರದರ್ಶಿಸುವುದು ಸಂತಸದ ವಿಷಯ. ಅಬ್ಸರ್ವರು ಪತ್ರಿಕೆಗೆ ಈಗ ನಾನು ಧಾರಾಳ ಎಂಬ ನೆಮ್ಮದಿ ಟುಡೇ ಟೈಮ್ಸ್‌ಗೆ ಬೆತ್ತಲೆಯೇ ಸುಗ್ಗಿ.

ಮೂರನೇ ಪುಟದಿಂದ ಎಲ್ಲಾ ಪುಟಕ್ಕೂ ಜಾರಿದ ಈ ದೃಷ್ಟಿಕೋನ ಸುದ್ದಿ ಎಂದರೆ ಇದೇ ಎಂಬ ಭ್ರಮೆ ಮೂಡಿಸಿದೆ.

ಇಡೀ ಇಂಗ್ಲೆಂಡ್ ಪತ್ರಿಕೋದ್ಯಮ ಇಂದು 'ಪೀಪಿಂಗ್ ಟಾಂ' ಪತ್ರಿಕೋದ್ಯಮವಾಗಿದೆ ಎಂದು ಖ್ಯಾತ ಮಾಧ್ಯಮ ತಜ್ಞ ಬೆನ್ ಎಚ್ ಬಾಗ್ಡಿಕಿಯಾನ್ ಬಣ್ಣಿಸಿದ್ದಾರೆ.

ಇತರರ ಖಾಸಗಿ ಬದುಕನ್ನು ಅವರಿಗೆ ಗೊತ್ತಾಗದಂತೆ ಕದ್ದು ಮುಚ್ಚಿ ನೋಡುವುದರಲ್ಲಿಯೇ ಸಂಭ್ರಮ ಅನುಭವಿಸುವ ಪೀಪಿಂಗ್ ಟಾಂ ಸ್ಥಿತಿ ಈಗ ಪತ್ರಿಕೋದ್ಯಮಕ್ಕೆ ಬಂದಿದೆ.

ಡಯಾನಾಳ ಖಾಸಗಿ ಬದುಕಿಗೆ ಲಗ್ಗೆ ಹಾಕುವ ಪತ್ರಿಕೆಗಳು ಜಿಮ್ನಾಷಿಯಂನಲ್ಲಿದ್ದಾಗ ಕ್ಯಾಮೆರಾ ಅಡಗಿಸಿಟ್ಟು ಚಿತ್ರ ತೆಗೆದು 'ಸ್ಕೂಪ್' ಪಡೆದ ಸಂಭ್ರಮ ಆಚರಿಸುತ್ತವೆ. ಪಾಕಶಾಸ್ತ್ರ ಕಲಿಸುವ ಅಡುಗೆ ಪುಸ್ತಕವೊಂದು ಜಾಹಿರಾತುಗಳಲ್ಲಿ ತನ್ನನ್ನು 'ಅತ್ಯಂತ ಸೆಕ್ಸಿ ಅಡುಗೆ ಪುಸ್ತಕ' ಎಂದು ಕರೆದುಕೊಳ್ಳುತ್ತಾರೆ.

ಜಾಗತೀಕರಣದ ಹೆಸರಿನಲ್ಲಿ ವಿಶ್ವದ ಬಹುತೇಕ ಪತ್ರಿಕೆಗಳು ಕೆಲವೇ ವ್ಯಕ್ತಿಗಳ ಗುತ್ತಿಗೆಗೊಳಪಡುವ ಸಮಯದಲ್ಲಿ ಈ ಎಲ್ಲಾ ಆಲೋಚನೆಗಳೂ ಭಾರತವನ್ನು ಪ್ರವೇಶಿಸಲು ಸಜ್ಜಾಗುತ್ತಿವೆ.

ಜಾಹಿರಾತುಗಳಿಂದ ನಿರ್ದೇಶಿಸಲ್ಪಡುವ ಪತ್ರಿಕೆಗಳು ಬಹುತೇಕ ತಮ್ಮ ಮಾತನ್ನು ಮಹಿಳೆಯಗೇ ನಿವೇದಿಸುತ್ತವೆ. ಭಾರತದ ಮಹಿಳೆಯರ ಮಧ್ಯೆ ಕೊಳ್ಳುಬಾಕ ಸಂಸ್ಕೃತಿಯನ್ನು ಹರಡುತ್ತವೆ. ಜಾಹಿರಾತು ತಯಾರಿಕಾ ಸಂಸ್ಥೆಗಳು ಮಹಿಳೆಯರನ್ನು ಗಮನದಲ್ಲಿಟ್ಟುಕೊಂಡೇ ತಮ್ಮ ಬಹುತೇಕ ಜಾಹಿರಾತುಗಳನ್ನು ಸಿದ್ಧಪಡಿಸುತ್ತವೆ. ಮೇಲ್ವರ್ಗದ ಬದುಕಿನ ರೀತಿಯನ್ನೇ ಆದರ್ಶವಾಗಿಟ್ಟುಕೊಂಡ ಮಧ್ಯಮ ವರ್ಗ ಮುಕ್ತ ಮಾರುಕಟ್ಟೆ ಮನೆಬಾಗಿಲಿಗೆ ತಂದು ಸುರಿಯುವ ಧಾರಾಳ ಆಯ್ಕೆಯನ್ನೂ, ಈ ಆಯ್ಕೆಯನ್ನು ನಾನಾ ರೀತಿಯಲ್ಲಿ ಮೇಲ್ವರ್ಗದ ಸಂಕೇತವೆಂಬಂತೆ ಜಾಹೀರು ಮಾಡಲು ಪತ್ರಿಕೆಗಳನ್ನೂ ನೀಡುವುದಿಂದ ಮಧ್ಯಮವರ್ಗ ಈ ಕೊಳ್ಳುಬಾಕ ಸಂಸ್ಕೃತಿಯ ಹೊಡೆತಕ್ಕೆ ಸುಲಭವಾಗಿ ತುತ್ತಾಗುತ್ತದೆ.

ಜಾಹಿರಾತುಗಳು ಕೇವಲ ಬೇಕುಗಳನ್ನು ಮಾತ್ರ ಸೃಷ್ಟಿಸುವ ಕೆಲಸ ಮಾಡದೆ ಮಧ್ಯಮವರ್ಗದ ಆಲೋಚನಾ ವಿಧಾನವನ್ನೇ ಪ್ರಶ್ನಿಸುವ ಕೆಲಸ ಮಾಡುತ್ತವೆ. ಮಹಿಳಾ ವಿಮೋಚನಾ ಹೋರಾಟ, ಬದಲಾವಣೆಗಾಗಿ ನಡೆಯುವ ಪ್ರಯತ್ನಗಳೆಲ್ಲವೂ ಜಾಹೀರಾತುಗಳ ಕೈಯಲ್ಲಿ ಗೇಲಿಗೊಳಪಡುತ್ತವೆ. ನಾಲ್ಕು ಗೋಡೆಯೊಳಗೇ ಮಹಿಳೆಯನ್ನು ಬಂಧಿಸಲು ಎಲ್ಲಾ ಜಾಹೀರಾತುಗಳೂ ಇಷ್ಟಪಡುತ್ತವೆ.

ನಮ್ಮ ತಂದೆ ತಾಯಿಯರ ಪೀಳಿಗೆಯನ್ನು ಎಷ್ಟು ಉಳಿಸುತ್ತಾರೆ ಎಂಬುದರ ಮೇಲೆ ಅಳೆಯಲಾಗುತ್ತಿತ್ತು. ಆದರೆ ಇಂದು ಎಷ್ಟು ಖರ್ಚು ಮಾಡುತ್ತಿದ್ದೇವೆ ಎನ್ನುವುದರ ಮೇಲೆ ನಮ್ಮ ಸ್ಥಾನಮಾನಗಳು ನಿಂತಿವೆ.

ಖರ್ಚು, ಇನ್ನಷ್ಟು ಖರ್ಚು, ಮತ್ತಷ್ಟು ಖರ್ಚು ಮಾಡಿಸಲು ಪತ್ರಿಕೆಗಳು ಸದಾ ತುದಿಗಾಲಿನಲ್ಲಿ ನಿಂತಿರುತ್ತವೆ. ಮಹಿಳೆಯ ಮನಸ್ಸಿನಲ್ಲಿ ಬೇರೂರಿರುವ ಎಷ್ಟು ಉಳಿಸಿದೆ ಸಂಸ್ಕೃತಿಯನ್ನು ಕಿತ್ತೊಗೆದು ಆಕೆಯ ಆದರ್ಶದ ರೀತಿಗಳನ್ನು ಬದಲಿಸಿದರೆ ಮಾತ್ರ ಬಹುರಾಷ್ಟ್ರೀಯ ಕಂಪನಿಗಳಿಗೆ ಮಾರುಕಟ್ಟೆ ಸಿಗಲು ಸಾಧ್ಯ. ಮಾತ್ರವಲ್ಲ ಬೇಕೆಂದಾಗ, ಬೇಕಾದ್ದನ್ನು ಹೇಳಿದರೂ ಕೇಳುವ ಒಂದು ವರ್ಗವನ್ನು ಈ ಜಾಹೀರಾತುಗಳು ಸೃಷ್ಟಿಸುತ್ತವೆ.

ಇಂತಹ ವಿದೇಶಿ ಪತ್ರಿಕೆಗಳು ಭಾರತದ ಹೊಸ್ತಿಲಿನಲ್ಲಿ ನಿಂತಿವೆ. ಸರ್ಕಾರದ ಒಂದು ಸನ್ನೆಗಾಗಿ ಮಾತ್ರ ಕಾಯುತ್ತಿವೆ. ಈ ಪತ್ರಿಕೆಗಳಿಗೂ ಮುನ್ನವೇ ಭಾರತವನ್ನು ಆಕಾಶದ ಮೂಲಕ ಮುಟ್ಟಿರುವ ಸ್ಯಾಟ್‌ಲೈಟ್ ಚಾನಲ್‌ಗಳು ಭಾರತದ ಪತ್ರಿಕೆಗಳ ಹೂರಣವನ್ನೇ ಬದಲಿಸುತ್ತಿದೆ. ಸುದ್ದಿಯು ಮನರಂಜನೆಯ ಆಯಾಮವನ್ನು ಪಡೆಯುತ್ತಿದೆ. ದಿನಪತ್ರಿಕೆಗಳು ಮನರಂಜನೆಗೆ ಒತ್ತುಕೊಡುವ ನಿಯತಕಾಲಿಕೆಗಳಾಗಿ ಪರಿವರ್ತನೆ ಹೊಂದಲು ಸಜ್ಜಾಗಿವೆ. ದಿನಪತ್ರಿಕೆ ಹಾಗೂ ಮ್ಯಾಗಜಿನ್‌ಗಳ ಸಮ್ಮಿಶ್ರವಾದ 'ಮ್ಯೆಗಾಪೇಪರ್'ಗಳು ತಲೆ ಎತ್ತುತ್ತಿವೆ. ಪತ್ರಿಕೆಯ ಮೂಲಕ ಹೊಸದೊಂದು ಸಂಸ್ಕೃತಿಯ ಆಲೋಚನೆ ಹರಡುವ ಕೆಲಸಕ್ಕೆ ನಾಂದಿ ಹೂಡಿದೆ.

ಮನರಂಜನೆ ನೀಡುವ ಮ್ಯೆಗಾಪೇಪರ್‌ಗೆ ಮಹಿಳೆಯೇ ಮುಖ್ಯವಸ್ತು. ಮಹಿಳೆಯನ್ನು ಬೆತ್ತಲೆಗೊಳಿಸುವುದರಲ್ಲಿಯೇ ಖುಷಿ ಪಡುವ ಜಾಹೀರಾತುಗಳು ಮಹಿಳೆ ಸರಕು ಎನ್ನುವಂತೆ ಮಾಡುವ ಜಾಹೀರಾತುಗಳು ಮಹಿಳೆಯನ್ನು ಮತ್ತೆ ಕೆಳಕ್ಕೆ ತಳ್ಳಲು ಮಾತ್ರ ಬಯಸುತ್ತಿವೆ.

ಪತ್ರಿಕೆಯಲ್ಲಿ ಪ್ರಕಟವಾಗುವ ಜಾಹೀರಾತು, ದೂರದರ್ಶನದ ಚಿತ್ರಗಳಿಂದಾಗಿ ಮಹಿಳೆಯರನ್ನು

ಚುಡಾಯಿಸುವುದು ಅತ್ಯಂತ ಹೆಚ್ಚಾಗಿದೆ. ಜಾಹಿರಾತಿನಲ್ಲಿ ತೋರಿಸುವ ರೀತಿಯಲ್ಲಿಯೇ ಎಲ್ಲಾ ಮಹಿಳೆಯರೂ ಇರುತ್ತಾರೆ ಎಂದು ಗಂಡಸರು ಭಾವಿಸಿದಂತಿದೆ ಎಂದು ದೆಹಲಿಯ ವಿದ್ಯಾರ್ಥಿನಿಯರು ರಾಷ್ಟ್ರೀಯ ಮಹಿಳಾ ಆಯೋಗದ ಮುಂದೆ ತಮ್ಮ ಅಳಲನ್ನು ತೋಡಿಕೊಂಡಿದ್ದಾರೆ.

ಮಿಂಟ್ ಪೆಂಪರ್‌ಮೆಂಟ್‌ನಿಂದ ಹಿಡಿದು ಜೀನ್ಸ್ ಪ್ಯಾಂಟ್‌ನ ಜಾಹೀರಾತುಗಳು ಹೆಣ್ಣನ್ನು ಕೀಳಾಗಿ ಸಂಭೋದಿಸುವುದನ್ನು ಕಲಿಸುತ್ತವೆ. ಮುಕ್ತ ಮಾರುಕಟ್ಟೆಯ ಭರಾಟೆಯಲ್ಲಿ ಹೆಣ್ಣು ನಲುಗುವಂತಾಗಿದ್ದಾಳೆ ಎನ್ನುತ್ತಾರೆ ಸಾಮಾಜಿಕ ಕಾರ್ಯಕರ್ತೆ ಜಯಾ ಜೈಟ್ಲೆ. 'ಮಹಿಳೆ ಚೆನ್ನಾಗಿದ್ದಾಳೆ' ಎಂದು ಮೆಚ್ಚುಗೆಯನ್ನು ಈ ಜಾಹೀರಾತುಗಳು 'ಮಹಿಳೆ ಸೆಕ್ಸಿಯಾಗಿದ್ದಾಳೆ' ಎಂಬ ಮೆಚ್ಚುಗೆಯಾಗಿ ಬದಲಾಯಿಸಿದೆ ಎನ್ನುತ್ತಾರೆ ಪತ್ರಕರ್ತೆ ಚಿತ್ರಾದೆ ಸುಬ್ರಹ್ಮಣ್ಯಂ.

ಮಹಿಳೆಯನ್ನು ಮತ್ತಷ್ಟು ಕೆಳದರ್ಜೆಗೆ ತಳ್ಳುವುದೇ ಮುಕ್ತತೆ ಎಂಬ ಮನೋಭಾವವನ್ನು ಈ ಜಾಹೀರಾತುಗಳು ಮುಂದಿಡುತ್ತವೆ.

ಮಾರುಕಟ್ಟೆಯಲ್ಲಿ ಈ ಜಾಹಿರಾತುಗಳಿಂದ ನಿರ್ದೇಶಿಸಲ್ಪಟ್ಟ ಪತ್ರಿಕೆಗಳು ಸುದ್ದಿಗಳಲ್ಲೂ ಮಹಿಳೆಯನ್ನು ಮನರಂಜನೆಯ ವ್ಯಕ್ತಿಯಾಗಿಸಲು ಬಯಸುತ್ತದೆ. ಆಕೆಯ ವಿಕೃತಿ ಚಿತ್ರಣ ನೀಡುವ, ಅತ್ಯಾಚಾರವನ್ನು ವೈಭವೀಕರಿಸುವ, ಸಮಾಜದ ಕಳಕಳಿಯನ್ನು ಮರೆಯಲು ಬಯಸುತ್ತದೆ.

ರೂಪ್‌ಕನ್ವರ್ ಸತಿ ಪ್ರಕರಣ ಪ್ರಕಟವಾಗುತ್ತಿದ್ದ ಜಾಗವನ್ನು ವಿಶ್ವಸುಂದರಿ ಸ್ಪರ್ಧೆಗಳೂ ಶಾಬಾನು ಪ್ರಕರಣದ ಜಾಗವನ್ನು ಭುವನಸುಂದರಿ ಸ್ಪರ್ಧೆಗಳೂ ಭ್ರೂಣ ಹತ್ಯೆಯ ಜಾಗವನ್ನು ಮುಗುಳ್ನಗುವ ಸುಂದರಿ ಸ್ಪರ್ಧೆಗಳು, ಅತ್ಯಾಚಾರದ ಬಗೆಗಿನ ಕಳಕಳಿಯ ಸಂಪಾದಕೀಯಗಳನ್ನು ದೇಹ ಚಂದವಿರುವ ಸುಂದರ ಸ್ಪರ್ಧೆಗಳು ಆಕ್ರಮಿಸುತ್ತವೆ.

ಹಿರಿಯ ಪತ್ರಕರ್ತೆಯರಾದ ಅಮು ಜೋಸೆಫ್ ಮತ್ತು ಕಲ್ಪನಾ ಶರ್ಮಾ 'ಯಾರ ಸುದ್ದಿ?' ಎಂಬ ಪುಸ್ತಕದಲ್ಲಿ Whose News ಎಂದು ಗಟ್ಟಿದನಿಯಲ್ಲಿ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿರುವ ಸುದ್ದಿ ಯಾರ ಬಗ್ಗೆ ಎಂಬುದರ ಬಗ್ಗೆ ಪ್ರಶ್ನಿಸಿದ್ದರು. ನೆನಪಿಡಿ ಇದು ಜಾಗತೀಕರಣಕ್ಕೂ ಮುಂಚೆ. ಆದರೆ ಈಗ ಭಾರತದ ಪತ್ರಿಕೆಗಳೇ ಮಾರುಕಟ್ಟೆಯ ಅಗತ್ಯದ ಬಗ್ಗೆ ಮಾತನಾಡುತ್ತಿರುವಾಗ ಅದಕ್ಕೆ ಇನ್ನೂ ಅಧಿಕೃತತೆಯ ಛಾಪು ನೀಡುವ ವಿದೇಶಿ ಪತ್ರಿಕೆಗಳು ಇಲ್ಲಿಗೆ ಬಂದಾಗ ಈ ಸುದ್ದಿಯೂ ಯಾವ ಸುದ್ದಿಯಾಗಬಹುದು.

ಅಮೇರಿಕಾ, ಇಂಗ್ಲೆಂಡ್‌ಗಳ ಕಣ್ಣುಗಳಲ್ಲಿ ಪ್ರಪಂಚವನ್ನು ನೋಡಲು ಇಷ್ಟಪಡುವ, ಎಪಿರಾಯಿಟರ್ ಸುದ್ದಿ ಸಂಸ್ಥೆಗಳ ಗುಲಾಮಗಿರಿಗೆ ಇಡಿಯಾಗಿ ತನ್ನನ್ನು ಒಡ್ಡಿಕೊಳ್ಳುವ ಪತ್ರಿಕೆಗಳು ಚಾರ್ಲ್ಸ್ ಮತ್ತು ಡಯಾನಾರ ಮದುವೆ, ಜಗಳ, ವಿಚ್ಛೇದನಗಳಲ್ಲಿ ಸಂಭ್ರಮ ಅನುಭವಿಸುತ್ತದೆಯೇ ಹೊರತು ದೇಶದಲ್ಲಿ ಒಂದು ಮಹಿಳಾ ಚಳುವಳಿ ರೂಪಿಸುವ ಬಗ್ಗೆ ಅಲ್ಲ. ಡಯಾನಾಳ ಖಾಸಗಿ ಕೋಣೆಗೆ ನುಗ್ಗುವ ಪತ್ರಿಕೆಗಳು ನಗ್ನತೆಯನ್ನು ಆರಾಧಿಸುತ್ತದೆಯೇ ಹೊರತು ಅತ್ಯಾಚಾರಕ್ಕೊಳಗಾದ ಮಹಿಳೆಯರ ನೋವುಗಳ ಚಿತ್ರಣವನ್ನಲ್ಲ.

'ಸುಶ್ಮಿತಾ ಸೇನ್ ಬಿಚ್ಚುತ್ತಾಳೆ' ಎಂದು ಮಾತ್ರ ಬಣ್ಣಿಸಲು ಇಷ್ಟಪಡುವ ನಮ್ಮ ಪತ್ರಿಕೆಗಳು ಆಕೆ ವಿಶ್ವದ ಎಲ್ಲಾ ರಾಷ್ಟ್ರಗಳ ಧ್ವಜಗಳನ್ನು ಬಿಚ್ಚುತ್ತಾಳೆ ಎಂಬುದನ್ನು ಮರೆಮಾಡಲು ಬಯಸುತ್ತವೆ. ಆ ಮೂಲಕ ಹತ್ತು ದಿನ ಚಲಾವಣೆಯಲ್ಲಿದ್ದು ಸಾವಿರ ಪ್ರತಿ ದಾಟಿಸಿದ ಸಂಭ್ರಮದಲ್ಲಿ ಬೀಗುತ್ತವೆ.

ಮಹಿಳಾ ವರದಿಗಾರರೂ ಸಾಕಷ್ಟು ಸಂಖ್ಯೆಯಲ್ಲಿ ಪತ್ರಿಕೋದ್ಯಮ ಕ್ಷೇತ್ರದಲ್ಲಿ ಇರುವಾಗ ಸುದ್ದಿಗಳಲ್ಲಿ Newsmen ಎಂದೇ ಸಂಭೋದಿಸಲು ಇಷ್ಟಪಡುವ ಪತ್ರಿಕೆಗಳು ಪುರುಷನ ಅಹಂಕಾರವನ್ನು ಹರಡಲು ಬಯಸುತ್ತವೆ.

ಈ ಕಾರಣಕ್ಕಾಗಿಯೇ ಎಲ್ಲೋ ಬುಡಕಟ್ಟುಗಳ ಮಧ್ಯೆ, ಗಿರಿ ಕಾನನಗಳಲ್ಲಿ, ನರ್ಮದಾ ದಂಡೆಗಳಲ್ಲಿ ಬನ್ವಾರಿದೇವಿಯ ಒಡಲಲ್ಲಿ ಅರಳುವ ಚಳುವಳಿಗಳು ಲೇವಡಿಗೊಳಗಾಗುತ್ತವೆ. ಲಕ್ಷ್ಮೀಪಾರ್ವತಿ ರಾಕ್ಷಸಿಯಂತೆ ಚಿತ್ರಿಸಲ್ಪಡುತ್ತಾರೆ. We want Revolution ಎಂಬ ಗಟ್ಟಿದನಿ ಜಾಹೀರಾತುಗಳ ಕೈಯಲ್ಲಿ ಕೇವಲ ಒಂದು ಮಿಕ್ಸಿಗಾಗಿ ನಡೆಯುವ ಹೋರಾಟ ಎಂಬಂತೆ ಚಿತ್ರಿಸಲ್ಪಡುತ್ತದೆ.

ದಿನ ಬೆಳಗಾದರೆ ನಮ್ಮ ಮನೆ ಬಾಗಿಲಿಗೆ ಬಿಕಿನಿತೊಟ್ಟ ಹುಡುಗಿಯರ ಚಿತ್ರ, ಅವಳ ಅಂಗಾಗಳದ ವಿವರಗಳನ್ನು ಹೊತ್ತ ಪತ್ರಿಕೆ ಬಂದು ಬೀಳಬೇಕೆ? ನಾನೇನೂ ಕಟ್ಟಾ ಸಂಪ್ರದಾಯವಾದಿಯಲ್ಲ. ಆದರೆ ಸುದ್ದಿ ಮತ್ತು ವಿಚಾರಗಳ ಹೆಸರಿನಲ್ಲಿ ನಾವು ಓದಬೇಕಾಗಿರುವುದು ಏನನ್ನು? ಅತಿಯಾದ ಹಾಸ್ಯ, ವ್ಯಂಗ್ಯ, ಟೀಕೆ, ಗಾಸಿಪ್ - ಇವು ಒಂದು ಪತ್ರಿಕೆ ಮಾನದಂಡವೇ? ಎಂದು ಪ್ರಶ್ನಿಸುತ್ತಾರೆ ಖ್ಯಾತ ಚಿಂತಕ ಎಂ. ಎನ್. ಶ್ರೀನಿವಾಸ್.

ಜಾಗತೀಕರಣ, ಮುಕ್ತ ಆರ್ಥಿಕ ನೀತಿ, ಮಾಹಿತಿ ವಿತರಣೆ, ಮುಕ್ತ ಆಲೋಚನೆ ಹೆಸರಿನಲ್ಲಿ ನಾವು ನಮ್ಮ 'ನಾಲ್ಕನೆಯ ಆಸ್ತಿ'ಯನ್ನು ನಾಲ್ಕನೇ ದರ್ಜೆಯ ವ್ಯಕ್ತಿಗಳ ಕೈಯಲ್ಲಿ ಒಪ್ಪಿಸಬೇಕೇ? ಎಂದು ಪ್ರಶ್ನಿಸುತ್ತಾರೆ ಖ್ಯಾತ ವ್ಯಂಗ್ಯ ಚಿತ್ರಕಾರ ಅಬು ಅಬ್ರಹಾಂ.

★

# ಅಹಿಂಸಾತ್ಮಕ ಹೋರಾಟದಲ್ಲಿ ಹದಿನಾಲ್ಕು ವರ್ಷ!

- ನೇಮಿಚಂದ್ರ

31 ಮಾರ್ಚ್ 1988 - ಇಂಗ್ಲೆಂಡಿನ ತನ್ನ ಬೆಚ್ಚನೆಯ ಮನೆಯಲ್ಲಿ ಇಚ್ಛೆಯನರಿತ ಪತಿ ಮತ್ತು ಮಕ್ಕಳೊಂದಿಗಿದ್ದ ಸಾನ್ ಸುಯಿಗ್ ದೂರವಾಣಿ ಕರೆ ಬಂದಿತು. ರಂಗೂನಿನಲ್ಲಿ ತಾಯಿ ಪಾರ್ಶ್ವವಾಯುಗೆ ಬಲಿಯಾಗಿ ಆಸ್ಪತ್ರೆಗೆ ಸೇರಿದ್ದಳು. ಮರುದಿನವೇ ವಿಮಾನ ಏರಿ ಬರ್ಮಾಕ್ಕೆ ಬಂದಿಳಿದ ಸಾನ್ ಸೂಕಿ ಕಳೆದ ಹದಿನಾಲ್ಕು ವರ್ಷಗಳಿಂದ ತನ್ನ ಮನೆಗೆ, ತನ್ನ ಗಂಡ-ಮಕ್ಕಳ ಬಳಿಗೆ ಹಿಂತಿರುಗದೆ ಇಲ್ಲಿಯೇ ಉಳಿದಳು - ತಾಯಿಯ ಕಾರಣಕ್ಕಲ್ಲ, ತಾಯ್ನಾಡಿನ ಕಾರಣಕ್ಕೆ. ಮೃತ್ಯುಶಯ್ಯೆಯಲ್ಲಿದ್ದ ಪತಿಯನ್ನು ಕಾಣುವ ತೀವ್ರ ತವಕವನ್ನು ತಡೆದುಕೊಂಡಳು. ಹೆಚ್ಚುಕಮ್ಮಿ ಕಳೆದ ಹದಿನಾಲ್ಕು ವರ್ಷಗಳ ಕಾಲವೂ ಈಕೆಯನ್ನು ಗೃಹಬಂಧನದಲ್ಲಿಟ್ಟು ಹತ್ತಿಕ್ಕಿದ ಬರ್ಮಾದ ಸರ್ವಾಧಿಕಾರಿಗಳು ಇದೀಗ ಮೇ ತಿಂಗಳಲ್ಲಿ ಸಾನ್ ಸೂಕಿಯ ಬಿಡುಗಡೆಯನ್ನು ಘೋಷಿಸಿದೆ.

ಬರ್ಮಾವನ್ನು 'ಮಯನ್ಮಾರ್' ಆಗಿಸಿ ಜನ ಸ್ವಾತಂತ್ರ್ಯವನ್ನು ಕಿತ್ತುಕೊಂಡ ಮಿಲಿಟರಿ ಸರ್ವಾಧಿಕಾರಕ್ಕೆ ಎದುರಾಗಿ ಅಹಿಂಸಾತ್ಮಕ ಹೋರಾಟ ನಡೆಸಿರುವ ಆಂಗನ್ ಸಾನ್ ಸೂಕಿ 1991ರಲ್ಲಿ ನೊಬೆಲ್ ಶಾಂತಿ ಪುರಸ್ಕಾರ ಪಡೆದಾಕೆ. ಬರ್ಮಾದ ಪ್ರಜಾಪ್ರಭುತ್ವ ಚಳುವಳಿಯ ಮುದಾಳಾದ ಸಾನ್ ಸೂಕಿ, ಕಳೆದ ಹದಿನಾಲ್ಕು ವರ್ಷಗಳ ಬಹಳಷ್ಟು ಭಾಗವನ್ನು ಗೃಹಬಂಧನದಲ್ಲಿ ಕಳೆದಿದ್ದಾರೆ. ರಂಗೂನಿನ ಯೂನಿವರ್ಸಿಟಿ ರಸ್ತೆಯ ಮನೆ ನಂ. 54ರಲ್ಲಿ ಹೆಚ್ಚು ಕಮ್ಮಿ ಒಂದೂವರೆ ದಶಕಗಳು ಕಳೆದು ಹೋಗಿವೆ - ಒಂದು ಅಹಿಂಸಾತ್ಮಕ ಹೋರಾಟದಲ್ಲಿ, ಜನಗಳ ಹಕ್ಕುಗಳನ್ನು ಮತ್ತೆ ದೊರಕಿಸಿಕೊಡುವ ಭರವಸೆಯ ಹೋರಾಟದಲ್ಲಿ. ಹತ್ತಿರದಲ್ಲಿಯೇ ರಂಗೂನ್ ವಿಶ್ವವಿದ್ಯಾಲಯ. ಸಾನ್ ಸೂಕಿ ತಂದೆ ಆಂಗ್ ಸಾನ್ ಬರ್ಮಾದ ರಾಷ್ಟ್ರನಾಯಕರಾದವರು. ಮುವತ್ತರ ದಶಕದಲ್ಲಿ ವಿದ್ಯಾರ್ಥಿ ಮುಖಂಡರಾಗಿ ಪ್ರಸಿದ್ಧಿಯ ತುದಿಗೇರಿದರು.

ಬದುಕಿನ ಬಹಳಷ್ಟು ವರ್ಷಗಳನ್ನು ತಾಯ್ನಾಡಿನಿಂದ ದೂರವಾಗಿ ಕಳೆದ ಸಾನ್ ಸೂಕಿ, ಬರ್ಮಾದ ಈ ಎರಡನೇ ಸ್ವಾತಂತ್ರ್ಯ ಹೋರಾಟಕ್ಕೆ ಪ್ರವೇಶಿಸಿದ್ದು ಆಕಸ್ಮಿಕವಾಗಿ. ಅವರ ಬದುಕು ಮತ್ತು ಬಿಡದೆ ಮುಂದುವರೆದ ಶಾಂತಿಯುತ ಹೋರಾಟ ಓರ್ವ ಮಹಿಳೆಯ ಅಸಾಧಾರಣ ಕತೆಯನ್ನು ಹೇಳುತ್ತವೆ.

'ಬರ್ಮಾ ಇಂಡಿಪೆಡೆನ್ಸ್ ಆರ್ಮಿ'ಯ ಕಮಾಂಡರ್ ಆಗಿದ್ದ ತಂದೆ ಆಂಗನ್ ಸಾನ್, ರಂಗೂನಿನ ಸಾರ್ವಜನಿಕ ಆಸ್ಪತ್ರೆಯಲ್ಲಿ ದಾದಿಯಾಗಿದ್ದ ಮಾ ಕಿನ್ ಕೀ ಅವರನ್ನು ಮದುವೆಯಾಗಿದ್ದರು. ಜೂನ್ 19, 1945ರಂದು ಈ ದಂಪತಿಗಳಿಗೆ ಮೂರನೇ ಮಗುವಾಗಿ ಆಂಗ್ ಸಾನ್ ಸೂಕಿ ರಂಗೂನಿನಲ್ಲಿ ಜನಿಸಿದಳು. 'ಆಂಗ್ ಸಾನ್' ಹೆಸರನ್ನು ತಂದೆಯಿಂದಲೂ 'ಸೂಕಿ' ಹೆಸರನ್ನು ತಾಯಿಯ ಕಡೆಯಿಂದಲೂ ಪಡೆದು ಹುಟ್ಟಿದ ಮಗು. ಒಬ್ಬಣ್ಣ ಸಣ್ಣ ವಯಸ್ಸಿನಲ್ಲಿಯೇ ತೀರಿಕೊಂಡ. ಮತ್ತೊಬ್ಬ ಅಣ್ಣ ಅಮೆರಿಕದ ಪ್ರಜೆಯಾಗಿ ಅಲ್ಲಿಯೇ ನೆಲೆಸಿದ. ಸಾನ್ ಸಾಕಿ ಕೇವಲ ಎರಡು ವರ್ಷದ ಮಗು, ತಂದೆ ಜೆನೆರಲ್ ಆಂಗ್ ಸಾನ್ ಅವರ ಹತ್ಯೆಯಾಯಿತು. ತಾಯಿ ಬರ್ಮಾದ ಸಾರ್ವಜನಿಕ ಬದುಕಿನಲ್ಲಿ ಭಾಗವಹಿಸಿ ಮುಂದುವರೆದಳು, ಸಾಮಾಜಿಕ ಯೋಜನೆಗಳಲ್ಲಿ ಮುಂದಾಳಾದಳು. 1948ರಲ್ಲಿ ಕಡೆಗೂ 'ಇಂಡಿಪೆಂಡೆಂಟ್ ಯೂನಿಯನ್ ಆಫ್ ಬರ್ಮಾ' ಸ್ಥಾಪಿತವಾಯಿತು. ತಾಯಿ ಕಿನ್ ಕೀ ಬರ್ಮಾದ ರಾಯಭಾರಿಯಾಗಿ ಭಾರತಕ್ಕೆ ಭೇಟಿ ಇತ್ತರು. ಜೊತೆಯಲ್ಲಿ ಹದಿನೈದು ವರ್ಷದ ಪುಟ್ಟ ಬಾಲಕಿ ಸಾನ್ ಸೂಕಿ ಹೊಸ ದಿಲ್ಲಿಗೆ ಬಂದಳು. ದಿಲ್ಲಿಯಲ್ಲಿಯೇ ಸಾನ್ ಸೂಕಿ ಶಾಲೆ ಮುಂದುವರೆಸಿದಳು. ನಂತರ ದಿಲ್ಲಿಯ 'ಲೇಡಿ ಶ್ರೀರಾಮ್ ಕಾಲೇಜಿ'ನಲ್ಲಿ ವಿದ್ಯಾಭ್ಯಾಸ ನಡೆಸಿದಳು. 1964ರಲ್ಲಿ ಸಾನ್ ಸೂಕಿ, ಇಂಗ್ಲೆಂಡಿಗೆ ತೆರಳಿ, ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದಿಂದ ಬಿ.ಎ. ಪದವಿಯನ್ನು ಪಡೆದಳು. ಇಲ್ಲಿ ಸಾನ್ ಸೂಕಿ ಮೈಕೇಲ್ ಆರಿಸ್ ಅವರನ್ನು ಬೇಟಿಯಾದಳು. ವಿದ್ಯಾಭ್ಯಾಸವನ್ನು ಮುಂದುವರೆಸಲು 1969ರಲ್ಲಿ ಸಾನ್ ಸಾಕಿ ನ್ಯೂಯಾರ್ಕಿಗೂ ಹೋದಳು. ಸಂಜೆಯ ಸಮಯದಲ್ಲಿ ಸಾನ್ ಸೂಕಿ, ಸ್ಥಳೀಯ ಆಸ್ಪತ್ರೆಯಲ್ಲಿ ಸ್ವಯಂಸೇವಕಳಾಗಿ ಸೇವೆ ಮಾಡುತ್ತಿದ್ದರು.

1972ರಲ್ಲಿ ಸಾನ್ ಸೂಕಿ ಮೈಕೇಲ್ ಆರಿಸ್ ವಿವಾಹವಾಗಿ ಅವರು ಪ್ರಾಧ್ಯಾಪಕರಾಗಿ ಕೆಲಸ ಮಾಡುತ್ತಿದ್ದ ಭೂತಾನಿಗೆ ಬಂದಿಳಿದರು. ಇಲ್ಲಿ ಸಂಶೋಧನ ಅಧಿಕಾರಿಯಾಗಿ ಕೆಲಸ ಪಡೆದರು. ಮರು ವರ್ಷ ಪತಿಯೊಡನೆ ಲಂಡನ್ನಿಗೆ ಹಿಂತಿರುಗಿದರು, ಮೊದಲ ಮಗ ಅಲೆಕ್ಸಾಂಡರ್ ಜನಿಸಿದ್ದ. 1977ರಲ್ಲಿ ಎರಡನೇ ಮಗ ಕಿಮ್ ಹುಟ್ಟಿದ. ಮಕ್ಕಳನ್ನು ಬೆಳೆಸುತ್ತಲೇ ಸಾನ್ ಸೂಕಿ ತನ್ನ ಬರಹವನ್ನು ಆರಂಭಿಸಿದರು. ತನ್ನ ತಂದೆಯ ಜೀವನಚರಿತ್ರೆಯನ್ನು ಬರೆಯಲು ಸಂಶೋಧನೆ ನಡೆಸಿದರು. ಪತಿಯ ಅಧ್ಯಯನಕ್ಕೆ ನೆರವಾದರು. 1987ರಲ್ಲಿ ಸಾನ್‌ಸೂಕಿ, ಸಿಮ್ಲಾದ 'ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಅಡ್ವಾನ್ಸ್‌ಡ್ ಸ್ಟಡೀಸ್' ಸಂಸ್ಥೆಯ ಫೆಲೋಷಿಪ್ ಪಡೆದರು. ಇಡೀ ಕುಟುಂಬದೊಡನೆ ಸಿಮ್ಲಾದಲ್ಲಿ ಕೆಲಸ ಸಮಯದಲ್ಲಿ ಸಾನ್ ಸೂಕಿ, ಲಂಡನ್‌ಗೆ ಹಿಂತಿರುಗಿ 'ಸೋಷಿಯೋ-ಪೊಲಿಟಿಕಲ್ ಕರೆಂಟ್ಸ್ ಇನ್ ಬರ್ಮಿಸ್ ಲಿಟರೇಚರ್' ಲೇಖನವನ್ನು ಪ್ರಕಟಿಸಿದರು.

1988ರ ಮಾರ್ಚ್ 31ನೇ ತಾರೀಖು, ರಂಗೂನಿನಿಂದ ದೂರವಾಣಿ ಕರೆ. ತಾಯಿಗೆ ಲಕ್ವಾ ಹೊಡೆದಿದೆ. ಮರುದಿನವೇ ರಂಗೂನಿಗೆ ಹಾರಿ ಬಂದಿಳಿದ ಸಾನ್ ಸೂಕಿ ಆಸ್ಪತ್ರೆಯಲ್ಲಿದ್ದ ತಾಯಿಯ ಶುಶ್ರೂಷೆ ಮಾಡಿ, ಆಕೆಯನ್ನು ಮನೆಗೆ ಕರೆತಂದರು. ಇದರಾಚೆಗೆ ಆಕೆಯ ಬದುಕು ಮಹತ್ತರ ತಿರುವನ್ನು ಪಡೆಯಿತು. ತನ್ನ ಬರಹ, ಸಂಶೋಧನೆ, ಗಂಡ-ಮಕ್ಕಳ ವೈಯಕ್ತಿಕ ಬದುಕಿನಲ್ಲಿ ಸುಖಿಯಾಗಿದ್ದ ಸಾನ್ ಸೂಕಿ ತಟ್ಟನೆ ಸಾರ್ವಜನಿಕ ಬದುಕಿಗೆ ಪ್ರವೇಶಿಸಿದ್ದರು.

ಮನೆಯಲ್ಲಿ ತಾಯಿಯ ಸೇವೆಯಲ್ಲಿ ತೊಡಗಿದ ಈ ಸಮಯದಲ್ಲಿ ಹೊರಗೆ ಬರ್ಮಾ ಹೊತ್ತಿ ಉರಿಯತೊಡಗಿತ್ತು. ಇದೇ ವರ್ಷ, ಚಹಾ ಅಂಗಡಿಯೊಂದರಲ್ಲಿ ನಡೆದ ಒಂದು ಸಣ್ಣ ಚಕಮಕಿ, ಪೋಲೀಸು ಮತ್ತು ವಿಶ್ವವಿದ್ಯಾಲಯದ ವಿದ್ಯಾರ್ಥಿಗಳ ನಡುವೆ ಹಿಂಸಾತ್ಮಕ ಮುಖಾಮುಖಿಗೆ ಕಾರಣವಾಗಿತ್ತು. ಪೋಲೀಸ್ ವಾಹನವೊಂದರಲ್ಲಿ 41 ವಿದ್ಯಾರ್ಥಿಗಳು ಉಸಿರುಕಟ್ಟಿ ಸತ್ತಿದ್ದರು. ಈ ಘಟನೆ ಸಾವಿರಾರು ವಿದ್ಯಾರ್ಥಿಗಳು ಬೀದಿಗಿಳಿದು ಪ್ರತಿಭಟಿಸುವಂತೆ ಮಾಡಿತ್ತು. 1962ರಿಂದಲೂ ಬರ್ಮಾದ ಮಿಲಿಟರಿ ಸರ್ವಾಧಿಕಾರಿಯಾಗಿ ಮೆರೆದ ಜೆನೆರಲ್ ನೆ ವಿನ್ ರಾಜಿನಾಮೆ ಕೊಡಬೇಕಾಯಿತು. ಪ್ರತಿಭಟನೆ, ಪ್ರದರ್ಶನಗಳು ಮುಂದುವರೆದಿದ್ದವು. ಜನರು ಸಾವಿರ ಸಾವಿರ ಸಂಖ್ಯೆಯಲ್ಲಿ ಬೀದಿಗಿಳಿದು ಪ್ರತಿಭಟಿಸಿದರು. ಸೇನೆ ಅತಿ ಕ್ರೂರವಾಗಿ ಹತ್ತಿಕ್ಕಿತು, ಗುಂಡಿಟ್ಟು ಕೊಂದಿತು. 8ರಂದು ದೇಶಾದ್ಯಂತ ಮುಷ್ಕರ ಘೋಷಿಸಲಾಯಿತು. ಬರ್ಮಾದ ಉದ್ದಗಲಕ್ಕೂ ಜನ ಸಾವಿರಾರು ಸಂಖ್ಯೆಯಲ್ಲಿ ಬೀದಿಗಿಳಿದರು. ಬರೀ ವಿದ್ಯಾರ್ಥಿಗಳಲ್ಲ, ಪ್ರಾಧ್ಯಾಪಕರು, ಸನ್ಯಾಸಿಗಳು, ಹೆಂಗಸರು, ಮಕ್ಕಳು ಎಲ್ಲರೂ. ಇದೇ ದಿನ ಜನತೆ ತುಳಿತದ ಆಡಳಿತದ ವಿರುದ್ಧ ನಿರ್ಣಾಯಕ ಹೋರಾಟಕ್ಕೆ ಇಳಿದರು. ಪ್ರದರ್ಶನಕಾರರ ಮೇಲೆ ಸೈನಿಕರು ಗುಂಡು ಹಾರಿಸಿದರು. ನೂರಾರು ಜನ ಅಮಾಯಕ ನಿಶಸ್ತ್ರಪ್ರದರ್ಶನಕಾರರು ಗುಂಡಿಗೆ ಬಲಿಯಾಗಿ ಸತ್ತರು. 8-8-88ರ ಈ ಹೋರಾಟದ ದಿನವನ್ನು 'ನಾಲ್ಕು ಎಂಟು ಚಳುವಳಿ' ಎಂದು ಕರೆಯುತ್ತಾರೆ. ಪ್ರದರ್ಶನಕಾರರ ಕೊಲೆಗಳು ಮುಂದುವರೆದವು, ಆದರೆ ಪ್ರದರ್ಶನಕಾರರು ರಸ್ತೆಗಳಲ್ಲಿ ತುಂಬಿ ಹರಿದರು.

ದೇಶದ ಈ ಪ್ರಕ್ಷುಬ್ಧ ಸ್ಥಿತಿಯಿಂದ ಪಾರಾಗಿ ಸಾನ್ ಸೂಕಿ ತನ್ನ ತಾಯಿಯನ್ನೂ ಕರೆದುಕೊಂಡು ಲಂಡನ್‌ನ ಸುರಕ್ಷಿತ ಬದುಕಿಗೆ ಓಡಬಹುದಿತ್ತು, ತನ್ನ ಗಂಡ-ಮಕ್ಕಳ ಕೌಟುಂಬಿಕ ಜೀವನಕ್ಕೆ ಹಿಂತಿರುಗಬಹುದಿತ್ತು. ಸಾನ್‌ಸೂಕಿ ಹಾಗೆ ಮಾಡಲಿಲ್ಲ, ದೇಶದ ಈ ಸಮಯದ ಕರೆಗೆ ಎದ್ದು ನಿಂತರು.

ಡೆಮೊಕ್ರಸಿ ಚಳುವಳಿ ಆರಂಭವಾಗುತ್ತಿದ್ದಂತೆ, ರಂಗೂನಿನ ವಿದ್ಯಾರ್ಥಿ ಸಮುದಾಯ ಆಂಗ್ ಸಾನ್ ಮನೆಗೆ ಆಗಮಿಸಿತು, ತಂದೆಯ ಹೋರಾಟದ ದೀವಟಿಗೆಯನ್ನು ಮಗಳು ಸಾನ್ ಸೂಕಿ ಕೈಗೆತ್ತಿಕೊಂಡರು. ಯೂನಿವರ್ಸಿಟಿ ರಸ್ತೆಯ ಸಾನ್ ಸೂಕಿ ಮನೆ ರಾಜಕೀಯ ಚಟುವಟಿಕೆಯ ಪ್ರಮುಖ ಸ್ಥಾನವಾಯಿತು. ಆಗಸ್ಟ್ 8ರ ರಕ್ತ ಕ್ರಾಂತಿಯಾಗಿ ಕೇವಲ ಹದಿನೆಂಟು ಜನ, ಆಗಸ್ಟ್ 26ರಂದು ಸಾನ್ ಸೂಕಿ ಬರ್ಮಾದ ಡೆಮೊಕ್ರಸಿ ಹೋರಾಟದ ಪ್ರಮುಖ ಮುಖಂಡಳಾಗಿ ಹೊರ ಬಂದರು. ತುಂಬಿ ತುಳುಕಿದ ಜನ ಸಮುದಾಯದ ಎದುರು ನಿಂತ ಸಾನ್ ಸೂಕಿ ಹೇಳಿದರು 'ನನ್ನ ತಂದೆಯ ಮಗಳಾಗಿ, ಇಲ್ಲಿಯ ಹೋರಾಟದಿಂದ ನಾನು ಹೊರಗುಳಿಯಲು ಸಾಧ್ಯವಿರಲಿಲ್ಲ. ಈ ರಾಷ್ಟ್ರೀಯ ಹೋರಾಟವನ್ನು ಎರಡನೇ ಸ್ವಾತಂತ್ರ್ಯ ಹೋರಾಟವೆಂದು ಕರೆಯಬೇಕಿದೆ'.

ಮತ್ತೊಂದೇ ತಿಂಗಳು, ಸೇನೆ ಸರಕಾರವನ್ನು ತನ್ನ ಕೈ ಹಿಡಿತಕ್ಕೆ ತೆಗೆದುಕೊಂಡಿತು. ತಮ್ಮನ್ನು 'ಸ್ಟೇಟ್ ಲಾ ಅಂಡ್ ಆರ್ಡರ್ ರೆಸ್ಟೊರೇಷನ್ ಕೌನ್ಸಿಲ್' (ಎಸ್.ಎಲ್.ಒ.ಆರ್.ಸಿ.) ಎಂದು ಕರೆದುಕೊಂಡಿತು. ಸೇನೆ ಬೀದಿಗಿಳಿಯಿತು, ಪ್ರತಿಭಟಿಸಿದವರ ಮೇಲೆ ಗುಂಡಿನ ಮಳೆ ಕರೆಯಿತು. ಸಾನ್ ಸೂಕಿ ಚುನಾವಣೆ ನಡೆಸುವಂತೆ ಸರಕಾರಕ್ಕೆ ತೆರೆದ ಪತ್ರ ಬರೆದರು. ಈಕೆಯ ಭಾಷಣ ಕೇಳಲು ಜನರು ಸಾವಿರ ಸಾವಿರ ಸಂಖ್ಯೆಯಲ್ಲಿ ಬಂದು ನೆರೆದರು. ಆಳುವ ಎಸ್.ಎಲ್.ಒ.ಆರ್.ಸಿ. ರಾಜಕೀಯ ಸಭೆಗಳನ್ನು ನಿಷೇಧಿಸಿತು. ನಾಲ್ಕಕ್ಕಿಂತ ಹೆಚ್ಚು ಜನ ಸೇರದಂತೆ ತಡೆಯಿತು. ಯಾವ ವಿಚಾರಣೆಯೂ ಇಲ್ಲದೆ ಬಂಧನಕ್ಕೆ ಒಳಪಡಿಸುವುದು, ಶಿಕ್ಷೆಗೆ ಗುರಿಪಡಿಸುವುದು ಸಾಮಾನ್ಯವಾಯಿತು. ಚಳುವಳಿಕಾರರನ್ನು ಬಂಧಿಸಿತು. ಸಾವಿರಾರು ಜನ ದೇಶದ ಗಡಿ ದಾಟಿ ಓಡಿದರು. ಅಧಿಕಾರವನ್ನು ಸಂಪೂರ್ಣವಾಗಿ ಕೈ ಹಿಡಿತಕ್ಕೆ ತೆಗೆದುಕೊಂಡ ಎಸ್.ಎಲ್.ಒ.ಆರ್.ಸಿ., ಸದ್ಯದಲ್ಲಿಯೇ ಚುಣಾವಣೆ ನಡೆಸುವುದಾಗಿ ಆಶ್ವಾಸನೆ ನೀಡಿತು.

ಸಾನ್ ಸೂಕಿ ಮತ್ತು ಆಕೆಯೊಡನೆಯ ಚಳುವಳಿಕಾರರು 'ನ್ಯಾಷನಲ್ ಲೀಗ್ ಫಾರ್ ಡೆಮೊಕ್ರಸಿ' ಎಂಬ ರಾಜಕೀಯ ಪಕ್ಷವನ್ನು ಕಟ್ಟಿದರು. ಅಹಿಂಸೆ ಮತ್ತು ನಾಗರೀಕ ಅಸಹಕಾರ ಇವರ ಪಕ್ಷದ ಧ್ಯೇಯೋದ್ಧೇಶವಾದವು. ಆಳುವ ವರ್ಗದ ನಿಷೇಧವನ್ನು ಕಡೆಗಣಿಸಿ ಸಾನ್ ಸೂಕಿ ದೇಶಾದ್ಯಂತ ಪ್ರವಾಸ ಮಾಡಿ, ದೊಡ್ಡ ಜನ ಸಮುದಾಯವನ್ನು ಉದ್ದೇಶಿಸಿ ಮಾತನಾಡಿದರು. ಡಿಸೆಂಬರ್ 27, ತಾಯಿ ಕಿನ್ ಕೀ ತೀರಿಕೊಂಡಳು. ತಾಯಿ ಅಂತ್ಯ ಸಂಸ್ಕಾರಕ್ಕೆ ಸೇರಿದ ಸಹಸ್ರ ಸಹಸ್ರ ಜನರನ್ನು ಉದ್ದೇಶಿಸಿ ಸಾನ್ ಸೂಕಿ ಮಾತನಾಡಿದರು. 'ಬರ್ಮಾದ ಜನರ ಸೇವೆಯಲ್ಲಿ ಬದುಕು ತೊಡಗಿಸಿದ ತನ್ನ ತಾಯಿ ಮತ್ತು ತಂದೆಯಂತೆಯೇ ತಾನೂ ತನ್ನ ಜೀವನದ ಕೊನೆಯವರೆಗೂ ಬರ್ಮಾದ ಸೇವೆಯಲ್ಲಿ ತೊಡಗುವುದಾಗಿ' ಪ್ರತಿಜ್ಞೆ ಮಾಡಿದರು. ಅಹಿಂಸಾತ್ಮಕ ಹೋರಾಟಕ್ಕೆ, ತನ್ನ ನಾಡಿನ ಮರುಸ್ವಾತಂತ್ರ್ಯಕ್ಕೆ ಪಣತೊಟ್ಟಳು. ಆಕೆಯ ಪ್ರಸಿದ್ಧಿ ಹೆಚ್ಚಿತು.

ಆಳುವ ವರ್ಗದ ಅಳುಕು ಆತಂಕ ಇಮ್ಮಡಿಸಿತು. ಸಾನ್ ಸೂಕಿಯನ್ನು ಚುನಾವಣೆಗೆ ನಿಲ್ಲದಂತೆ ನಿಶೇಧಿಸಲಾಯಿತು. ಏಪ್ರಿಲ್ 5, 1989, ತನ್ನೆಡೆಗೆ ರೈಫಲ್ ಗುರಿ ಇಟ್ಟ ಸೈನಿಕನತ್ತ ಸಾನ್ ಸೂಕಿ ಕಿಂಚಿತ್ತೂ ಅಳುಕದೆ ದಿಟ್ಟವಾಗಿ ನಡೆದರು. ಜನರನ್ನು ಉದ್ದೇಶಿಸಿ ಮಾತನಾಡಿದರು. ತಟ್ಟನೆ ಸಾನ್ ಸೂಕಿಯನ್ನು ನಿರ್ಬಂದಿಸಿದರು, ಯಾವೊಂದೂ ವಿಚಾರಣೆಯಿಲ್ಲದೆ ಗೃಹಬಂಧನದಲ್ಲಿಟ್ಟರು.

1990 ಚುನಾವಣೆ ನಡೆಯಿತು, ಸಾನ್ ಸೂಕಿಯ ಪಕ್ಷ ಅದ್ಭುತ ಜಯ ಗಳಿಸಿತು. ಪಾರ್ಲಿಮೆಂಟಿನ ಶೇಕಡಾ 82ರಷ್ಟು ಸೀಟುಗಳು ಇವರದಾಗಿತ್ತು. ತಟ್ಟನೆ ಎಸ್.ಎಲ್.ಒ.ಆರ್.ಸಿ. ಚುನಾವಣಾ ಫಲಿತಾಂಶವನ್ನು ನಿರಾಕರಿಸಿತು. ಮತ್ತೆ ಬರ್ಮಾಕ್ಕೆ ಪ್ರಜಾಪ್ರಭುತ್ವ ಕೈಗೆಟುಕದೆ ಹೋಯಿತು. ಸಾನ್ ಸೂಕಿಯ ಹೋರಾಟ ಮುಂದುವರೆಯಿತು. ಮರುವರ್ಷ ಸಾನ್ ಸೂಕಿಗೆ ನೊಬೆಲ್ ಶಾಂತಿ ಪುರಸ್ಕಾರ ದೊರೆಯಿತು. ಪ್ರಶಸ್ತಿ ಪಡೆಯಲು ದೇಶದಿಂದ ಹೊರಗೆ ಹೋದರೆ, ಮತ್ತೆ ಬರ್ಮಾ ಪ್ರವೇಶಿಸದಂತೆ ತನ್ನನ್ನು ತಡೆಯುವರೆಂದು ಅರಿವಿದ್ದ ಸಾನ್ ಸೂಕಿ ನೊಬೆಲ್ ಪ್ರಶಸ್ತಿ ಪಡೆಯಲು ಹೋಗಲಿಲ್ಲ. ಆಕೆಯ ಪರವಾಗಿ ಮಗ ಅಲೆಕ್ಸಾಂಡರ್ ಮತ್ತು ಕಿಮ್ ಪ್ರಶಸ್ತಿಯನ್ನು ಪಡೆದರು. ಸಾನ್ ಸೂಕಿ ಗೃಹಬಂಧನ ಮುಂದುವರೆಯಿತು..ದೇಶ ಬಿಟ್ಟು ಹೋಗುವುದಾದರೆ, ರಾಜಕೀಯದಿಂದ ದೂರ ಉಳಿಯುವುದಾದರೆ ಬಂಧನ ಮುಕ್ತಳಾಗಿ ಮಾಡುವುದಾಗಿ ಎಷ್ಟೇ ಆಮಿಷ ತೋರಿದರೂ, ಸಾನ್ ಸೂಕಿ ನಿರಾಕರಿಸಿದಳು. ತನ್ನತ್ತ ನಿರೀಕ್ಷೆಯಿಟ್ಟ ಜನರ ಹೋರಾಟವನ್ನು ತೊರೆದು ಇಂಗ್ಲೆಂಡಿಗೆ ಹಿಂತಿರುಗಲು ಸಿದ್ಧವಿರಲಿಲ್ಲ. ವರ್ಷವರ್ಷಗಳು ತನ್ನ ಮನೆ, ಪತಿ, ಮಕ್ಕಳಿಂದ ದೂರ ಉಳಿಯಬೇಕಾದ ಈ ನಿರ್ಣಯ ಬಲು ಕಠಿಣವಾದದ್ದು. ಆಕೆಯ ಬಿಡುಗಡೆಗೆ ವಿಶ್ವದ ಎಲ್ಲ ಮೂಲೆಯಿಂದಲೂ ಬೇಡಿಕೆ ಬಂದಿತು. ತನಗೆ ದೊರೆತ 1.3 ಮಿಲಿಯನ್ ಡಾಲರುಗಳ ನೊಬೆಲ್ ಪ್ರಶಸ್ತಿ ಹಣವನ್ನು ಸಾನ್ ಸೂಕಿ ಬರ್ಮಾದ ಜನರ ಆರೋಗ್ಯ ಮತ್ತು ಶಿಕ್ಷಣಕ್ಕೆ ನೆರವಾಗುವ ಟ್ರಸ್ಟ್ ಸ್ಥಾಪಿಸಲು ಮುಡಿಪಿಟ್ಟಳು. ನೊಬೆಲ್ ಶಾಂತಿ ಪುರಸ್ಕೃತರು ಬರ್ಮಾಗೆ ಬರಲಿಚ್ಛಿಸಿದರು, ಸಾನ್ ಸೂಕಿಯ ಭೇಟಿಗೆ. ಅವರಿಗೆ ಪ್ರವೇಶ ನಿರಾಕರಿಸಲಾಯಿತು, ಅವರ ಬೇಡಿಕೆಯನ್ನು ತಳ್ಳಿ ಹಾಕಲಾಯಿತು. 1991ರಲ್ಲಿ ಪತಿ ಸಂಪಾದಕರಾಗಿ ಆಕೆಯ ಪುಸ್ತಕ 'ಫ್ರೀಡಮ್ ಫ್ರಮ್ ಫಿಯರ್' ಹೊರತಂದರು. 1995ರಲ್ಲಿ ಅಂತರಾಷ್ಟ್ರೀಯ ಒತ್ತಡದ ಮೇಲೆ ಸಾನ್ ಸೂಕಿಯನ್ನು ಗೃಹಬಂಧನದಿಂದ ಬಿಡುಗಡೆ ಕೊಟ್ಟರೂ ಆಕೆಯ ಓಡಾಟಕ್ಕೆ ನಿಬಂಧನೆಗಳನ್ನು ಒಡ್ಡಿದರು. ಆಕೆಯ ಜೀವಕ್ಕೆ ಅಪಾಯವಿತ್ತು. ತನ್ನ ಕುಟುಂಬವನ್ನು ದೂರವಾಣಿಯ ಮೂಲಕ ಮಾತನಾಡಿಸುವುದೂ ಕಷ್ಟವಾಗಿತ್ತು. 'ನ್ಯಾಷನಲ್ ಲೀಗ ಆಫ್ ಡೆಮೊಕ್ರಸಿ' ಸದಸ್ಯರನ್ನೆಲ್ಲ ಜೈಲಿನಲ್ಲಿ ಹಿಡಿದಿಟ್ಟರು, ಅವರ ಮೇಲೆ ದೈಹಿಕ ಹಲ್ಲೆಗಳು ನಡೆದವು. ಸಾನ್ ಸೂಯಿ ಮನೆಯ ಎದುರು ಜನ, ದೊಡ್ಡ ಪ್ರಮಾಣದಲ್ಲಿ ಬಂದು ನಿಲ್ಲತೊಡಗಿದರು. ಜನ ಸಮುದಾಯವನ್ನು ತನ್ನ ಬೆಂಬಲಿಗರನ್ನು ಉದ್ದೇಶಿಸಿ ಮಾತನಾಡುತ್ತಿದ್ದ ಸಾನ್ ಸೂಯಿ ಮಾತುಗಳಿಗೂ ಕಡಿವಾಣ ಬಿದ್ದಿತು. ಈ ರೀತಿಯ ಸಭೆಗಳನ್ನು ಸರಕಾರ ನಿಲ್ಲಿಸಿತು, ನಿಷೇಧಿಸಿತು. ಸರಕಾರದ ಸಮೂಹ ಮಾಧ್ಯಮಗಳು ಸತತವಾಗಿ ಆಕೆಯ ವಿರುದ್ಧ ಕೆಲಸ ಮಾಡಿದವು. ಹೀಗಿದ್ದೂ ಸಾನ್ ಸೂಕಿಯ ಜನಪ್ರಿಯತೆ ಕಿಂಚಿತ್ತೂ ಕುಗ್ಗಲಿಲ್ಲ. ಇಷ್ಟೆಲ್ಲ ನಿಬಂಧನೆಗಳ ನಡುವೆಯೂ ಸಾನ್ ಸೂಕಿ, 1995ರಲ್ಲಿ ಬೀಜಿಂಗ್‌ನಲ್ಲಿ ನಡೆದ ಅಂತರ್‍ರಾಷ್ಟ್ರೀಯ ಮಹಿಳಾ ಸಮಾರಂಭಕ್ಕೆ ವೀಡಿಯೋ ಕ್ಯಾಸೆಟ್ ಮೂಲಕ ತನ್ನ ಮಾತುಗಳನ್ನು ಕಳುಹಿಸಿದ್ದರು !

1999ರ ಮಾರ್ಚ್ ತಿಂಗಳು, ಪತಿ ಕ್ಯಾನ್ಸರ್ ರೋಗದಿಂದ ನರಳುತ್ತಾ ಲಂಡನ್‌ನ ಆಸ್ಪತ್ರೆ ಸೇರಿದರು. ಒಂದೇ ಒಂದು ಬಾರಿ ತನ್ನ ಪತ್ನಿಯನ್ನು ಬಂದು ನೋಡಲು ಬಯಸಿದ ಪತಿ, ಬರ್ಮಾಕ್ಕೆ ಬರಲು ಅನುಮತಿಯನ್ನು ಕೋರಿದರು. ಬರ್ಮಾದ ಅಧಿಕಾರ ವರ್ಗ ನಿರ್ದಯವಾಗಿ ನಿರಾಕರಿಸಿತು. ವರ್ಷ ವರ್ಷಗಳಿಂದ ಆಕೆಯನ್ನು ಆತ ನೋಡಿರಲಿಲ್ಲ. ಇಂತಹ ಹೃದಯ ವಿದ್ರಾವಕ ಕ್ಷಣದಲ್ಲಿ ಸಾನ್ ಸೂಕಿ ಮೃತ್ಯುಶಯ್ಯೆಯಲ್ಲಿರುವ ಪತಿಯನ್ನು ನೋಡಲು ಲಂಡನ್‌ಗೆ ಹೋಗುವಳೆಂದು, ಸರ್ವಾಧಿಕಾರದ ಸರಕಾರ ಕಾದಿತ್ತು. ಲಂಡನ್‌ಗೆ ಹೋಗುವಂತೆ ಎಲ್ಲಿಲ್ಲದ ಒತ್ತಡ ತಂದಿತು. ಆದರೆ ಸಾನ್ ಸೂಕಿಗೆ ತಿಳಿದಿತ್ತು, ಒಮ್ಮೆ ಬರ್ಮಾ ಬಿಟ್ಟು ಹೊರಗೆ ಹೋದರೆ, ಮತ್ತೆ ಅವಳಿಗೆ ಈ ದೇಶಕ್ಕೆ ಪ್ರವೇಶ ಕೊಡುವುದಿಲ್ಲ. ತನ್ನ ಜನರ ಹೋರಾಟದಿಂದ ಶಾಶ್ವತವಾಗಿ ಹೊರಗುಳಿಯಬೇಕಾಗುತ್ತದೆ ಎಂದು ಅರಿವಿದ್ದ ಸಾನ್ ಸೂಕಿ, ಅತ್ಯಂತ ಕಠಿಣ ನಿರ್ಧಾರವನ್ನು ತೆಗೆದುಕೊಳ್ಳಬೇಕಾಯಿತು. ಸಾಯುತ್ತಿರುವ ಗಂಡನನ್ನು ತನ್ನ ಬಳಿಗೆ ಬರಲು ಬಿಡುತ್ತಿಲ್ಲ, ತಾನು ಆತನಲ್ಲಿಗೆ ಹೋಗುವಂತಿಲ್ಲ. ಸ್ವತಂತ್ರ ಬರ್ಮಾದ ಕನಸಿಗಾಗಿ ಸಾನ್ ಸೂಕಿ ವೈಯಕ್ತಿಕ ತ್ಯಾಗಕ್ಕೆ ಸಿದ್ಧವಾದಳು. ಪತಿ ತೀರಿಕೊಂಡರು. ಸಾನ್ ಸೂಕಿಯ ಹೋರಾಟ ಮುಂದುವರೆಯಿತು.

ಈ ವರ್ಷದ ಮೇ ತಿಂಗಳು, ಮತ್ತೊಮ್ಮೆ ಮಿಲಿಟರಿ ಸರಕಾರ ಆಕೆಯ ಬಿಡುಗಡೆಯನ್ನು ಘೋಷಿಸಿದೆ. ಅದು ನಿಜವಾದ ಬಿಡುಗಡೆಯೇ ಅಲ್ಲವೆ, ಕಾದು ನೋಡಬೇಕಿದೆ. ಬರ್ಮಾದ ಈ ಸ್ವಾತಂತ್ರ ಹೋರಾಟ ಗುರಿ ಮುಟ್ಟುವುದೆ, ಸಾನ್ ಸೂಕಿ ರಾಷ್ಟ್ರನಾಯಕಿಯಾಗಿ ಎದ್ದು ನಿಲ್ಲುವರೆ? ಒಳಗಿನ ಸರ್ವಾಧಿಕಾರವನ್ನು ಎದುರಿಸುವಂತೆ, ಹೊರಗಿನ ಶ್ರೀಮಂತ ರಾಷ್ಟ್ರಗಳ ಒಳ ನುಗ್ಗಿ ಅಧಿಕಾರ ಚಲಾಯಿಸುವುದನ್ನು, ದೇಶದ ಸಂಪನ್ಮೂಲಗಳನ್ನು ಲೂಟಿ ಮಾಡುವುದನ್ನು ಸಾನ್ ಸೂಕಿ ತಡೆಯಬಲ್ಲರೆ, ಬರ್ಮಾಕ್ಕೆ ಕನಸಾಗಿರುವ ಪ್ರಜಾಪ್ರಭುತ್ವವನ್ನು ತಂದು ಕೊಡುವರೆ - ಇವೆಲ್ಲವನ್ನೂ ಕಾದು ನೋಡಬೇಕಿದೆ.



★ ★ ★

# ಪತ್ರಿಕೋದ್ಯಮ ಮತ್ತು ಮಹಿಳಾ ಚಳುವಳಿ

- ವಿಜಯ ದಬ್ಬೆ

ಪುರುಷ ಮತ್ತು ಪುರುಷಕೇಂದ್ರಿತ ದೃಷ್ಟಿಕೋನವೇ ನಮ್ಮ ಸಮಾಜ, ಸಂಸ್ಕತಿಯನ್ನು ಸಂಪೂರ್ಣವಾಗಿ ಆವರಿಸಿದ್ದ, ನಮ್ಮ ನ್ಯಾಯಾಂಗ, ಆಡಳಿತಾಂಗಗಳಾದಿಯಾಗಿ ಎಲ್ಲ ಕ್ಷೇತ್ರಗಳನ್ನೂ ಆಳುತ್ತಿದ್ದ ಕಾಲದಿಂದ ಹಲವು ಕ್ಷೇತ್ರಗಳಿಗೆ ಮಹಿಳೆಯರು ಪ್ರವೇಶಿಸುತ್ತಿರುವ, ಮಹಿಳಾ ಪ್ರಶ್ನೆಗಳು ಹಲವು ಕ್ಷೇತ್ರಗಳಲ್ಲಿ 'ಕಾಣಿಸಿ' ಕೊಳ್ಳುತ್ತಿರುವ ಕಾಲಕ್ಕೆ ಬಂದಿದ್ದೇವೆ. ಅಭಿವೃದ್ಧಿ ಯೋಜನೆಯಲ್ಲಿ ಮಹಿಳೆ, ಅಭಿವೃದ್ಧಿ ಮತ್ತು ಮಹಿಳೆ ಎಂಬಲ್ಲಿಂದ ಅಭಿವೃದ್ಧಿಯೋಜನೆ ಮತ್ತು ಲಿಂಗ ವ್ಯವಸ್ಥೆ ಎಂಬಲ್ಲಿಗೆ ನಮ್ಮ ಅಭಿವೃದ್ಧಿ ನೀಲಿ ನಕ್ಷೆಗಳು ಸರಿಯುತ್ತಿರುವಲ್ಲಿಗೆ ತಲುಪುತ್ತಿದ್ದೇವೆ. ಇಂಥ ಸ್ಥಿತ್ಯಂತರ ಕಾಲದಲ್ಲಿ ನಮ್ಮ ಇಂದಿನ ಪತ್ರಿಕೋದ್ಯಮವು ಸ್ಥಿತ್ಯಂತರಕಾಲದ ಹಲವು ಇಕ್ಕಟ್ಟುಗಳನ್ನು ಎದುರಿಸುತ್ತಲೇ ಸ್ಥಿತ್ಯಂತರದಲ್ಲಿ ಅತ್ಯಂತ ಮಹತ್ವದ ಪಾತ್ರವಹಿಸುತ್ತಿದೆ. ಇವತ್ತು ಮಹಿಳಾ ಚಳುವಳಿಯಷ್ಟೇ ಅಲ್ಲ ಇಡಿಯಾದ ನಮ್ಮ ಸಂದರ್ಭದಲ್ಲಿ ಮಾಧ್ಯಮಕ್ಕಿರುವ ಭೀಮಬಲ ಎಂಥದೆಂಬುದು ಸ್ಪಷ್ಟವೇ ಇದೆ. ಸಾಕ್ಷರತೆಯ ಪ್ರಮಾಣ ನೂರಕ್ಕೆ ನೂರರಷ್ಟು ಇಲ್ಲದಿದ್ದರೂ ಮುದ್ರಣ ಮಾಧ್ಯಮ ಇಂದು ವಿದ್ಯುನ್ಮಾಧ್ಯಮಗಳೊಂದಿಗೆ ಮಾಡುತ್ತಿರುವ ಸೆಣಸಾಟ ಎಷ್ಟೇ ತೀವ್ರವಾಗಿದ್ದರೂ ಮುದ್ರಣ ಮಾಧ್ಯಮದ ಪ್ರಾಬಲ್ಯಕ್ಕೆ ಅದರದೇ ಆದ ಅನುಕೂಲಗಳೂ ಆಯಾಮಗಳೂ ಇವೆ. ನಮ್ಮಲ್ಲಂತೂ ಮುದ್ರಣ ಮಾಧ್ಯಮದ ಸೂರ್ಯನಿಗೆ ಸದ್ಯಕ್ಕೆ ಅಸ್ತಮಾನದ ಆತಂಕವಿಲ್ಲ. 'ವಸ್ತು ಸಂಸ್ಕೃತಿ'ಯ ವೈಭವೀಕರಣದಲ್ಲಿ ಅದಕ್ಕಿಂತ ಅನ್ಯವಾದ ಮೌಲ್ಯಗಳೆಲ್ಲ ಲಘುವಾಗುವ, ಹೂತುಹೋಗುವ ಅಪಾಯದ ಅವಸ್ಥೆಯಲ್ಲಿ ಈ ಅಪಾಯದ ಸಂದರ್ಭವನ್ನೇ ತನ್ನ ಅಂಥದೇ ಗುರಿಗಾಗಿ ಬಳಸಿಕೊಳ್ಳುತ್ತಿರುವ ಪತ್ರಿಕೆಗಳೂ ಹುಲುಸಾಗಿ ಬೆಳೆಯುತ್ತಿವೆಯಾದರೂ ಇಲ್ಲಿ ಮುಖ್ಯವಾಗಿ 'ಗಂಭೀರ ಪತ್ರಿಕೋದ್ಯಮ'ಕ್ಕೆ ಈ ವಿಷಯವನ್ನು ಮಿತಿಗೊಳಿಸಿಕೊಂಡಿದ್ದೇವೆ.

ಒಂದು ಸಮೂಹದಲ್ಲಿನ ಸಾಮಾನ್ಯವಾದ ಕೊರತೆ, ಅಸಮತೋಲನ, ಅನ್ಯಾಯದಿಂದ ಎದ್ದ ಒಂದು ಸಾಮೂಹಿಕ ಅತೃಪ್ತಿಯೇ ಒಂದು ಚಳುವಳಿಯ ಹುಟ್ಟಿಗೆ ಕಾರಣವಾಗಿರುತ್ತದೆ. ಈ ಅಸಮತೋಲನವನ್ನು, ಅತೃಪ್ತಿಯನ್ನು ಹೋಗಲಾಡಿಸಬೇಕೆಂಬ ಜಾಗೃತಿ, ಹೋಗಲಾಡಿಸುವುದರಲ್ಲಿ ಬದ್ಧತೆ ಒಂದು ಚಳುವಳಿಯ ಮೂಲಾಂಶವಾಗಿರುತ್ತದೆ. ಉದ್ದೇಶಿತ ಬದಲಾವಣೆಯನ್ನು ತರುವುದೇ ಚಳುವಳಿಯ ಗುರಿಯಾಗಿರುತ್ತದೆ. ಗಂಭೀರ ಪತ್ರಿಕೋದ್ಯಮದ ನಿಜವಾದ ಗುರಿ ಕೂಡ ಸಮಾಜದ ವಸ್ತುಸ್ಥಿತಿಯನ್ನು ಸಮೂಹದ ಮುಂದಿಡುತ್ತಾ ಸ್ಥಿತಿಯ ಬಗ್ಗೆ ಜನಜಾಗೃತಿಯನ್ನು ಚಿಂತನೆಯನ್ನು ಪ್ರೇರೇಪಿಸುತ್ತಾ ಬದಲಾವಣೆಯತ್ತ ಸಾಗಲು ನೆರವಾಗುವುದಾಗಿದೆ. ಚಳುವಳಿಗಳಿಗೆ ಪತ್ರಿಕೆಗಳು ಅನಿವಾರ್ಯ, ಸಮೂಹ ಜಾಗೃತಿ, ಸಮೂಹ ಸಂಪರ್ಕ ಚಳುವಳಿಯ ಮೊದಲ ಮೆಟ್ಟಿಲಾಗಿದೆ. ತನ್ನ ಮುಖವಾಣಿಯಾದ ಪತ್ರಿಕೆಗಳಿಲ್ಲದೆ, ಮಾಧ್ಯಮದ ಬೆಂಬಲವಿಲ್ಲದೆ ಯಾವ ಚಳುವಳಿಯಾದರೂ ಹೆಜ್ಜೆಯಿಡಲಾರದು. ಚಳುವಳಿಯೊಂದಿಗಿನ ಸಂಪರ್ಕ, ಸಂವಾದದಿಂದ ಪತ್ರಿಕೋದ್ಯಮ ಸಕಾಲಿಕವಾಗುತ್ತದೆ, ಸಮಕಾಲೀನತೆಗೆ ಸಂವೇದನಾಶೀಲವಾಗುತ್ತದೆ. ಚಳುವಳಿಯ ಇತಿಹಾಸ ಪತ್ರಿಕೋದ್ಯಮದ ಇತಿಹಾಸದೊಂದಿಗೂ ಚಳುವಳಿಗಾರರ ಇತಿಹಾಸ ಪತ್ರಿಕೋದ್ಯಮಿಗಳ ಇತಿಹಾಸದ ಜೊತೆಗೂ ಬೆರೆತುಹೋಗಿದೆ. ಅಷ್ಟೇಕೆ ಎಷ್ಟೋ ಸಾರಿ ಚಳುವಳಿಗಾರರೊಳಗೆ ಪತ್ರಿಕೋದ್ಯಮಿಗಳೂ ಇದ್ದಾರೆ ಅಥವಾ ಪತ್ರಕೋದ್ಯಮಿಗಳಲ್ಲಿ ಚಳುವಳಿಗಾರರಿದ್ದಾರೆ. ಮಹಿಳಾ ಚಳುವಳಿಯೂ ಇದಕ್ಕೆ ಹೊರತಲ್ಲ. ಕರ್ನಾಟಕದಲ್ಲಿಯೂ ಆಧುನಿಕ ಕಾಲದಲ್ಲಿ ಮಹಿಳಾ ಪರವಾದ ಕ್ರಿಯಾಶೀಲತೆಗೆ ಮೊದಲಿಗರಾದ ತಿರುಮಲಾಂಬ, ಕಲ್ಯಾಣಮ್ಮ, ಭಾರತಿ, ಸರಸ್ವತಿ ಬಾಯಿ ರಾಜವಾಡೆ, ಶ್ಯಾಮಲಾ ದೇವಿ, ಎಂ.ಆರ್.ಲಕ್ಷಮ್ಮ, ಮೊದಲಾದವರೆಲ್ಲರೂ ಪತ್ರಿಕೋದ್ಯಮದ ಒಳಗಿದ್ದವರೇ. ಸಾಮಾಜಿಕ ಕಾಳಜಿಯುಳ್ಳ ಚಿಂತಕರು, ಸಾಮಾಜಿಕ ಚಳುವಳಿಗಳ ಮುಂಚೂಣಿಯಲ್ಲಿರುವವರೆಲ್ಲ ಪತ್ರಿಕೆಗಳನ್ನು ತಮ್ಮ ಕಾರ್ಯವಿಧಾನದ ಒಂದು ಅಂಗವಾಗಿಯೇ ಪರಿಗಣಿಸಿರುವುದು ಸಹಜವಾಗಿದೆ. ಚಳುವಳಿ ಮತ್ತು ಪತ್ರಿಕೋದ್ಯಮದ ಈ ಇತ್ಯಾತ್ಮಕ ಸಂಬಂಧವಿರುವಂತೆಯೇ ಒಂದು ನೇತ್ಯಾತ್ಮಕವಾಗಿಯೂ ಇರುವ ಸಂಬಂಧವಿದೆ. ಅದು ವಾಸ್ತವತೆಯ ಇನ್ನೊಂದು ಮುಖ. ಇತ್ಯಾತ್ಮಕ ಸಂಬಂಧವೇ ಬಲವಾಗುತ್ತಾ ಹೋಗುತ್ತಿರುವುದು ಸಂತೋಷದ ವಿಷಯವಾದರೂ ಈ ಎರಡೂ ಮುಖಗಳಿರುವ ಮಿಶ್ರನಲೆ ಇಂದಿನದಾಗಿದೆ. ನಮ್ಮ ಸಾಮಾಜಿಕ. ಸಾಂಸ್ಕೃತಿಕ ಪರಿಸ್ಥಿತಿಯಲ್ಲಿ ಇದು ಸಹಜ. ಮಹಿಳೆಯರನ್ನು ಕುರಿತಂತೆ ಸಾಂಸ್ಕೃತಿಕ ಇತಿಹಾಸದಲ್ಲಿ ಮಿಶ್ರನೆಲೆಯಿದೆ, ಸಾಮಾಜಿಕ ಪರಿಸರದಲ್ಲಿ ಹಿನ್ನಡೆ ಮುನ್ನಡೆಗಳು ಪರಸ್ಪರ ವಿರುದ್ಧ ದಿಕ್ಕಿಗೆ ಮಹಿಳಾಪ್ರಗತಿಯನ್ನು ಎಳೆದಾಡುತ್ತಿವೆ.

ಈ ಪರಿಸ್ಥಿತಿಯು ಪತ್ರಿಕೋದ್ಯಮದಲ್ಲಿ ಬಿಂಬಿಸಿದೆ. ಮಹಿಳಾ ಚಳುವಳಿ ಮತ್ತು ಪತ್ರಿಕೋದ್ಯಮವನ್ನು ಕುರಿತು ಬಂದ ಪ್ರತಿಕ್ರಿಯೆಯಲ್ಲಿಯೂ ಈ ಭಿನ್ನತೆ ಇದೆ. ಎಂಬತ್ತರ ದಶಕದ 'ಸ್ಟೇಟಸ್ ಆಫ್ ವಿಮೆನ್ ಕಮಿಟಿ' ಹೇಳಿದಂತೆ 'ಗಂಭೀರ ಪತ್ರಿಕೋದ್ಯಮವು ಬಹುತೇಕ ಮಹಿಳೆಯರ ಸ್ಥಾನಮಾನವನ್ನು ಕಡೆಗಾಣಿಸಿಲ್ಲ, ಸಾಧ್ಯವಾದಾಗಲೆಲ್ಲ ಮಹಿಳಾ ಪಾತ್ರದ ಮೇಲೆ

ಬೆಳಕು ಚೆಲ್ಲುವಂಥ ಸುದ್ದಿಯನ್ನು ಪ್ರಕಟಿಸಿದೆ.' ಪಮೇಲಾ ಫಿಲಿಪೋಸ್ ಅವರು ಈ ಅಭಿಪ್ರಾಯವನ್ನು ವಿರೋಧಿಸುತ್ತಾ ಜನಸಂಖ್ಯೆಯ ಅರ್ಧದಷ್ಟಿರುವ ಹೆಂಗಸರಿಗೆ ಕೊಡಬೇಕಾದ ಪ್ರಾಮುಖ್ಯತೆಯನ್ನು ಈ 'ಗಂಭೀರ ಪತ್ರಿಕೋದ್ಯಮ' ಕೊಡದೆ ಅವಮಾನಿಸಿದೆ ಎನ್ನುತ್ತಾರೆ. ಚಿಪ್ಕೊ ಚಳುವಳಿ ಕುರಿತು ಬಂದ ಸುದ್ದಿಯಲ್ಲಿ ಚಿಪ್ಕೊ ಚಳುವಳಿಗೂ ಮಹಿಳಾ ಜೀವನಕ್ಕೂ ಇದ್ದ ಸಂಬಂಧ ಸರಿಯಾಗಿ ಗಮನಕ್ಕೆ ಬರಲಿಲ್ಲ. ಬಹುಗುಣರ ನಾಯಕತ್ವವನ್ನು ಮೆರೆಸಿತು, ಚಳುವಳಿಯಲ್ಲಿದ್ದ ಮಹಿಳೆಯರು ಅಲಕ್ಷಿತರಾದರು ; ಕುಟುಂಬ ಕಲ್ಯಾಣಯೋಜನೆಗೆ ಸಂಬಂಧಿಸಿದ ಸುದ್ದಿಯಲ್ಲಿ ಮಹಿಳಾ ದೃಷ್ಟಿಕೋನವಿಲ್ಲ; ಪಂಜಾಬಿನ ಹಸಿರು ಕ್ರಾಂತಿಯ ಬಗ್ಗೆ ಮಾತಾಡುವಾಗ ಅಲ್ಲಿನ ಮಹಿಳೆಯರ ಸ್ಥಿತಿ ಲಕ್ಷ್ಯಕ್ಕೆ ಬರುವುದಿಲ್ಲ - ಎಂಬಿವೇ ಮೊದಲಾದ ನಿದರ್ಶನಗಳಿಂದ ಪಮೇಲಾ ತಮ್ಮ ಅಭಿಪ್ರಾಯವನ್ನು ಸಮರ್ಥಿಸಿಕೊಂಡಿದ್ದಾರೆ. ಈ ಪ್ರತಿಕ್ರಿಯೆ ವಿಭಿನ್ನ ನೆಲೆಗಳಿಗೆ ಪರಿಸ್ಥಿತಿಯ ಸಂಮಿಶ್ರತೆ ಕಾರಣವಾಗಿದೆ. ನಮ್ಮ ಉಳಿದ ಕ್ಷೇತ್ರಗಳಂತೆ ಪತ್ರಿಕೋದ್ಯಮವೂ ಸೇರಿದಂತೆ ಒಟ್ಟಾರೆ ಮಾಧ್ಯಮ ಕ್ಷೇತ್ರ ಕೂಡ ಸೆಕ್ಸಿಸ್ಟ್ ಮನೋಭಾವದಿಂದ ಪೂರ್ತಿಯಾಗಿ ಬಿಡುಗಡೆ ಹೊಂದಿಲ್ಲ. ಅಂತೆಯೇ ಅದಕ್ಕನುಗುಣವಾಗಿ ಮಹಿಳಾ ವಿಷಯವನ್ನು ಕುರಿತು ಪ್ರತಿಕ್ರಿಯೆ ಇದೆ ಎಂಬುದು ಈಗಾಗಲೇ ಪ್ರಸ್ತಾಪಿತವಾದ ವಿಷಯ. ಆದರೆ 1975ರಿಂದೀಚೆಗೆ ಅದರಲ್ಲೂ ಕಳೆದ ಒಂದೂವರೆ ದಶಕದಲ್ಲಿ ಪತ್ರಿಕೋದ್ಯಮವು ಮಹಿಳಾ ವಿಷಯದಲ್ಲಿ ಇತ್ಯಾತ್ಮಕವಾದ ಬದಲಾವಣೆಯನ್ನು, ಹೊಸ ಎಚ್ಚರ ಮತ್ತು ಜವಾಬ್ದಾರಿಯನ್ನು ತೋರಿರುವುದೂ ನಿಜ, ಮಹಿಳಾ ಚಳುವಳಿಗಷ್ಟೇ ಅಲ್ಲದೆ ಒಟ್ಟು ಸಮಾಜದ ಸ್ಥಿತಿಗೂ ಪ್ರಗತಿಗಾಮಿತ್ವಕ್ಕೂ ಪತ್ರಿಕೋದ್ಯಮವು ಸಂವೇದನಾಶೀಲವಾಗಿರುವುದರಿಂದ ಹೊಸ ಆಯಾಮಗಳು ತೆರೆದುಕೊಂಡಿವೆ. ಈ ಸ್ಪಂದನ ಯಾವ ಪ್ರಮಾಣದಲ್ಲಿ ಎಷ್ಟು ತೀವ್ರವಾಗಿದೆ ಎಂಬುದು ನಿರ್ದಿಷ್ಟ ಪತ್ರಿಕೆಯ ಹಿನ್ನೆಲೆ, ತಾತ್ವಿಕತೆ, ಅಲ್ಲಿನ ಪತ್ರಿಕೋದ್ಯಮಿಗಳ ಸಿದ್ಧತೆ ಮೊದಲಾದ ಅಂಶಗಳಿಗೆ ಸಂಬಂಧಿಸಿದೆ. ಎಡ ಪಂಥೀಯ ತುದಿಯಿಂದ ಬಲ ಪಂಥೀಯ ತುದಿಯವರೆಗೆ ಹಬ್ಬಿರುವ ಪತ್ರಿಕೆಗಳಲ್ಲಿ ಮಹಿಳಾ ವಿಷಯಕವಾದ ಕಾಳಜಿ ಮತ್ತು ಸ್ಪಂದನ ವಿಭಿನ್ನವಾಗಿರುವುದು ನಿರೀಕ್ಷಿಸಬಹುದಾದ ಸಂಗತಿ.

ಮಹಿಳೆಯರಿಗೆ ಅಥವಾ ಲಿಂಗವ್ಯವಸ್ಥೆಗೆ ಸಂಬಂಧಿಸಿದ ಸುದ್ದಿಗಳು ನಮ್ಮ ಪತ್ರಿಕೆಗಳ ಮುಖ್ಯ ಸುದ್ದಿಗಳಾಗುವುದಿಲ್ಲ, ಒಂದೊಮ್ಮೆ ಹಾಗೆ ಮುಖ್ಯ ಸುದ್ದಿಯಾದರೂ ಅತ್ಯಾಚಾರದಂಥ 'ಹೆಂಗಸರ ವಿಷಯ' ಸಂಪಾದಕೀಯಕ್ಕೆ ಯಾಕೆ ಅದನ್ನು ಮಹಿಳಾ ಪುಟಕ್ಕೆ ಹಾಕಿ ಎಂಬಂಥ ಕಾಲ ಬಂದಿದ್ದದ್ದು ನಿಜ. ಆದರೆ ಈಗ ರಾಜಕೀಯ ಮೀಸಲಾತಿ ಚರ್ಚೆಯ ವಿಷಯ ಬಂದಾಗ, ಯುಎನ್‌ಡಿಪಿಯ ವರದಿ ಬಂದಾಗಿ ಲಿಂಗ ಸಂಬಂಧಿ ಅಭಿವೃದ್ಧಿಯ ಸ್ಥಿತಿಯನ್ನು ಪ್ರಸ್ತಾಪಿಸುವ ಸಂದರ್ಭ ಬಂದಾಗ ಭಾರತದ ಶ್ರೇಷ್ಠ ನ್ಯಾಯಾಧೀಶರಾಗಿದ್ದ ರಂಗನಾಥ ಮಿಶ್ರಾ ಅವರು ಮಹಿಳೆಯರು ಕುಟುಂಬಗಳಿಗೆ ಹಿಂದಿರುಗಬೇಕೆಂದು ಕರೆ ನೀಡಿದಾಗ - ಇಂಥ ಎಲ್ಲ ಸಂದರ್ಭಗಳಲ್ಲಿ ಸಂಪಾದಕೀಯದ ಗಂಭೀರ ವಿಷಯ ಪ್ರಸ್ತಾಪದ ಭಾಗದಲ್ಲೇ ಈ ವಿಷಯಗಳು ಸಹಜವಾಗಿ ಪ್ರಸ್ತಾಪಗೊಳ್ಳುವ ಕಾಲಕ್ಕೆ ಬರುತ್ತಿದ್ದೇವೆ. ಮಹಿಳಾ ಸುದ್ದಿಯನ್ನು ರೋಚಕಗೊಳಿಸಲಾಗುತ್ತದೆ, ಕ್ಷುಲ್ಲಕಗೊಳಿಸಲಾಗುತ್ತದೆ ಇಲ್ಲವೇ ತಿರುಚಲಾಗುತ್ತದೆ ಎಂದು ಅಮ್ಮು ಜೋಸೆಫ್ ಮತ್ತು ಕಲ್ಪನಾ ಶರ್ಮ 'ಹೂಸ್ ನ್ಯೂಸ್' ಎಂಬ ತಮ್ಮ ಪುಸ್ತಕದಲ್ಲಿ ಹೇಳುತ್ತಾರೆ. ಪತ್ರಿಕೋದ್ಯಮದ 'ಸುದ್ದಿ'ಯ ನಿರ್ವಚನದಲ್ಲಿಯೂ ಪತ್ರಿಕೋದ್ಯಮದ ಆದ್ಯತೆಗಳಲ್ಲಿಯೂ ನೋಡಿದರೆ ಅದರೊಂದಿಗೇ ನಮ್ಮ ರಾಜಕಾರಣ, ಸಂಸ್ಕೃತಿ, ಸಮಾಜದಲ್ಲಿ ಮಹಿಳೆ ಏನಾಗಿದ್ದಾಳೆ ಎಂಬುದನ್ನೂ ಗಮನಿಸಿದರೆ ಮಹಿಳೆಯರು ಯಾಕೆ ಸಾಮಾನ್ಯವಾಗಿ ಸಾಮಾನ್ಯವಾದ ಸುದ್ದಿಯಾಗುವುದಿಲ್ಲ ಎಂಬುದಕ್ಕೆ ವಿವರಣೆ ದೊರಕೀತು. ಈಗಿನ ಸ್ಥಿತಿಯಲ್ಲಿ ಸಂತರು-ಭ್ರಷ್ಟರು, ಸಜ್ಜನರು-ಭಂಡರು, ಕಾನೂನುಪಾಲಕರು-ಕಾನೂನು ಮುರುಕರು ಎಲ್ಲದಕ್ಕೂ ಹೆಚ್ಚಿನ ಜವಾಬ್ದಾರಿ, ನಿರ್ದೇಶನಗಳು ಪುರುಷಲೋಕದಲ್ಲಿರುವುದರಿಂದ ಎಲ್ಲ ಸಂಸ್ಥೆಗಳೂ ಬಹುತೇಕ ಪುರುಷಪ್ರಧಾನವಾಗಿರುವುದರಿಂದ ಆ ಕ್ಷೇತ್ರಗಳನ್ನು ಪ್ರತಿಬಿಂಬಿಸುವುದೆಂದರೆ ಪುರುಷಲೋಕದ ಪ್ರತಿಬಿಂಬವೇ ಆಗುತ್ತದೆ. 'ಸುದ್ದಿ'ಗಳ ನಿರ್ಮಾತೃಗಳು, ಸಂಬಂಧಿಗಳು ಮಹಿಳೆಯರಾಗಿರುವುದು ಅಪರೂಪವಾಗಿರುವಾಗ ಮಹಿಳೆಯರು ಮುಖಪುಟಗಳಿಗೆ ಹೇಗೆ ತಾನೇ ಬರುತ್ತಾರೆ? ಈ ಕಾಣಿಸಿಕೊಳ್ಳದಿರುವಿಕೆಯು ಒಂದು 'ಸಾಂಕೇತಿಕ ವಿನಾಶ' ಎಂದೂ ತಿಳಿಯಲಾಗಿದೆ. ಅಮ್ಮು ಜೋಸೆಫ್ ಮತ್ತು ಕಲ್ಪನಾ ಶರ್ಮ ಸರಿಯಾಗಿ ಗುರುತಿಸುವಂತೆ ಮಹಿಳೆಯರಿಗೆ ಸಂಬಂಧಪಟ್ಟ ವಿಷಯಗಳು ಘಟನೆಗಳಾಗದೆ ಪ್ರತಿಕ್ರಿಯೆಗೆ ಸೇರಿರುವುದರಿಂದ ಹಾಗೂ ಅವುಗಳಲ್ಲಿ ಸಾಕಷ್ಟು ವ್ಯಕ್ತಿ ಹಿಂಸೆ, ನಾಟಕೀಯತೆ ಇಲ್ಲದಿರುವುದೂ ಕೂಡ ಈ ಕಾಣಿಸದಿರುವಿಕೆಗೆ ಕಾರಣವಾಗಿದೆ. ವಧುದಹನ, ಅತ್ಯಾಚಾರ, ಸತಿಗಳು ವರದಿಯಾಗುವ ರೀತಿಯಲ್ಲಿ ಮಹಿಳೆಯ ಸಂಬಂಧಿಯಾದ ಇತರ ವಿಷಯಗಳು ಸುದ್ದಿಯಾಗದಿರುವ ಕಾರಣವೂ ಇದೇ ಆಗಿದೆ. ಮಹಿಳೆಯರು ಮೇಲೆ ಸೂಚಿಸಿದ ಎಲ್ಲ ಕ್ಷೇತ್ರಗಳಲ್ಲಿ ನಿರ್ಣಾಯಕ ಶಕ್ತಿಗಳಾಗುವವರೆಗೆ 'ಸುದ್ದಿ'ಯಲ್ಲಿ ಅಷ್ಟು ಮುಖ್ಯಳಾಗುವುದಿಲ್ಲ. ಇನ್ನು 'ರೋಚಕವಾಗಿಸುವ' 'ಕ್ಷುಲ್ಲಕವಾಗಿಸುವ', 'ತಿರುಚುವ' ಪ್ರತಿಕ್ರಿಯೆಗಳು ಖಂಡಿತವಾಗಿ ಇವೆ, ಸಾಕಷ್ಟಿವೆ. ಆದರೆ ಇದನ್ನು ಎಲ್ಲ ಪತ್ರಿಕೆಗಳ ಎಲ್ಲ ಸಂದರ್ಭಗಳಿಗೆ ಅನ್ವಯಿಸಲಾಗುವುದಿಲ್ಲ. ಅದರಲ್ಲೂ ಪತ್ರಿಕೋದ್ಯಮವೂ ಲಿಂಗ ವ್ಯವಸ್ಥೆಯ ನ್ಯಾಯಕ್ಕಾಗಿ ತುಡಿಯುತ್ತಲೂ ಇರುವ, ಲಿಂಗ ವ್ಯವಸ್ಥೆಯ ಕುರುಡುತನವನ್ನು ಕ್ರಮೇಣ ಕಳೆದುಕೊಳ್ಳುತ್ತಿರುವ ಈಚಿನ ಗಂಭೀರ

ಪತ್ರಿಕೋದ್ಯಮದ ಬಗ್ಗೆ ಸಾಧಾರಣೀಕರಿಸಿ ಮೇಲಿನ ಮಾತನ್ನು ಈಗ ಒಪ್ಪುವುದು ಕಷ್ಟವೆಂದೇ ನನಗೆ ತೋರುತ್ತದೆ. 'ರೋಚಕ'ವಾಗಿಸುವ 'ತಿರುಚುವ' ಪ್ರಯತ್ನಗಳು ನಡೆದಾಗಲೆಲ್ಲ ಓದುಗರಾದ ಸಾರ್ವಜನಿಕರು, ಮಹಿಳಾ ಚಳುವಳಿಗಾರರು, ಮಹಿಳಾ ಕಾಳಜಿಯುಳ್ಳವರೆಲ್ಲ ಅಲ್ಲಲ್ಲಿಯೇ ಪ್ರತಿಕ್ರಿಯೆ ತೋರದಿರುವುದು ಕೂಡ ಇಂಥ ಸಂದರ್ಭದ ಮುಂದುವರಿಕೆಯನ್ನು ಸರಾಗವಾಗಿಸುತ್ತದೆ. ಈ ಕ್ರಿಯಾಲೋಪ ಮಾಡುವವರಲ್ಲಿ ಮೊದಲು ನನ್ನನ್ನು ನಾನೇ ನೆನೆಯುತ್ತೇನೆ. ಕನ್ನಡ ಪತ್ರಿಕೋದ್ಯಮವನ್ನು ಗಮನದಲ್ಲಿಟ್ಟುಕೊಂಡು ಹೇಳುವುದಾದರೆ ಮಹಿಳಾ ಚಳುವಳಿ ಮತ್ತು ಪತ್ರಿಕೋದ್ಯಮದ ನಡುವೆ ಪರಸ್ಪರ ಆದರವಿದ್ದರೂ ಅವೆರಡರ ನಡುವೆ ಇನ್ನಷ್ಟು ಸಂವಾದ ಬೇಕಾಗಿದೆ. ಎಲ್ಲಕ್ಕಿಂತ ಮುಖ್ಯವಾಗಿ ಒಂದನ್ನೊಂದು ರಚನಾತ್ಮಕ ವಿಮರ್ಶೆಯಿಂದ ಬೆಳಸಬೇಕಾಗಿದೆ, ಕರ್ನಾಟಕದ ಕೆಲವು ಕೇಂದ್ರಗಳಲ್ಲಿಯಾದರೂ ಪತ್ರಿಕೋದ್ಯಮವನ್ನು ಸೂಕ್ಷ್ಮವಾಗಿ ಗಮನಿಸುತ್ತಾ ಮಹಿಳಾ ಚಳುವಳಿ ಅದರೊಂದಿಗೆ ಸಂವಾದವನ್ನು ಬೆಳೆಸಿಕೊಳ್ಳಬೇಕಾಗಿದೆ. ಕಳೆದ ದಶಕದಲ್ಲಿ ಸಿ.ಎಸ್. ಲಕ್ಷ್ಮಿ, ವಿಭೂತಿ ಪಟೇಲ್ ಮೊದಲಾದವರು ತಮಿಳು, ಗುಜರಾತಿ, ಮರಾಠಿ ಮೊದಲಾದ ಭಾಷೆಗಳ ಪತ್ರಿಕೆಗಳ ಅಧ್ಯಯನ ಮಾಡಿದ್ದಾರೆ. ಪತ್ರಿಕೆಗಳು ಪ್ರಾದೇಶಿಕ ಭಾಷೆಗಳ ಪತ್ರಿಕೆಗಳು ಸಾಮಾನ್ಯವಾಗಿ ಸಾಂಪ್ರದಾಯಿಕ, ಸ್ತ್ರೀವಾದಿ ಚಿಂತನೆಗಳಿಗೆ ಬಾಗಿಲು ತೆರೆಯದವು ಎಂಬ ಅಭಿಪ್ರಾಯ ಬಂದಿದೆ. ಆದರೆ ಅಂಥ ಸಂದರ್ಭದ ಸೃಷ್ಟಿಗೆ ಹಲವು ಕಾರಣಗಳಿವೆ, ಪ್ರಾದೇಶಿಕ ಭಾಷಾ ಪತ್ರಿಕೆಗಳ ಸ್ಥಿತಿ ಕೂಡ ಒಂದೇ ತೆರನಾಗಿಲ್ಲ ಹಾಗೂ ಕಳೆದ ಒಂದು, ಒಂದೂವರೆ ದಶಕಗಳಲ್ಲಿ ಲಿಂಗವ್ಯವಸ್ಥೆಯ ನ್ಯಾಯಕ್ಕೆ ಈ ಪತ್ರಿಕೆಗಳು ಹೆಚ್ಚು ಸಂವೇದನಾಶೀಲವಾಗುತ್ತಿವೆ ಎಂಬ ಅಂಶಗಳನ್ನೂ ನಾವು ಗಮನಿಸಬೇಕು. ಬೇರೆ ಕ್ಷೇತ್ರಗಳಲ್ಲಿ ಕೆಲಸಮಾಡುವವರಿಗೆ ಅಲ್ಲಲ್ಲಿ ನೀಡಲಾಗುತ್ತಿರುವ ಲಿಂಗವ್ಯವಸ್ಥೆಯ ನ್ಯಾಯದೃಷ್ಟಿ ಕುರಿತ ಅಲ್ಪಾವಧಿಯ ತರಬೇತಿ ಔಪಚಾರಿಕವಾಗಿಯೋ ಅನೌಪಚಾರಿಕವಾಗಿಯೋ ಪತ್ರಿಕೋದ್ಯಮದಲ್ಲಿರುವವರಿಗೂ ಸಿಕ್ಕಿದರೆ ಪತ್ರಿಕೋದ್ಯಮಿಗಳು ಮಹಿಳಾ ವಿಷಯಕವಾದ ಪ್ರಕರಣ, ಸಂಗತಿಗಳನ್ನು ಇನ್ನಷ್ಟು ಸಮಗ್ರವಾಗಿ ಸೂಕ್ಷ್ಮವಾಗಿ ಜನರ ಮುಂದಿಡಬಹುದು. ಈ ದಿಕ್ಕಿನಲ್ಲಿ ಮಹಿಳಾ ಗುಂಪುಗಳೂ ಕೂಡ ಹೆಚ್ಚಿನ ಆಸಕ್ತಿ ತೋರಬೇಕಾಗಿದೆ. ಕಾಲಕಾಲಕ್ಕೆ ಆಯಾ ಸ್ಥಳದ ಪತ್ರಿಕೆಗಳನ್ನೂ ಬೇರೆ ಬೇರೆ ಪತ್ರಿಕೆಗಳನ್ನು ದೃಷ್ಟಿಯಿಂದ ಸವಿಮರ್ಶವಾಗಿ ಸಮೀಕ್ಷಿಸುವುದು, ಸಂವಾದಗಳನ್ನು ಏರ್ಪಡಿಸುವುದು, ಕೂಡ ಅಗತ್ಯವಾಗಿದೆ.

ಸುದ್ದಿಯಾಗುವ, ಅತಿಸುದ್ದಿಯಾಗುವ ಮಹಿಳೆಯರೂ ಇದ್ದಾರೆ. ಅಧಿಕಾರ ಅದರಲ್ಲೂ ರಾಜಕೀಯ ಅಧಿಕಾರ, ಶಕ್ತಿ ಇರುವ ಮಹಿಳೆಯರಿಗೆ ಪತ್ರಿಕೆಗಳಿಗೆ ಸ್ಥಳ ದೊರಕೇ ದೊರಕುತ್ತದೆ. ಇಂಥವರ ಸಂಖ್ಯೆ ಕಡಿಮೆ ಇರುವುದರಿಂದ ಸುದ್ಧಿಯೂ ಕಡಿಮೆ. ಅಧಿಕಾರದಲ್ಲಿದ್ದಾಗ ಲಲಿತಾ ನಾಯಕ, ಖಲೀದಾ, ಚಂದ್ರಿಕಾ, ಬೆನ್‌ಜೀರ್, ಜಯಲಲಿತಾ, ಮಾರ್ಗರೆಟ್ ಥ್ಯಾಚರ್ ಮೊದಲಾದವರು ಪತ್ರಿಕೆಗಳಲ್ಲಿ ಕಂಡೇ ಕಾಣುತ್ತಿದ್ದರು, ಕಾಣುತ್ತಿದ್ದಾರೆ. ಕಿರಣ್ ಬೇಡಿ, ಫೂಲನ್ ದೇವಿ, ಮದರ್ ತೆರೇಸಾ ಮೊದಲಾದವರೆಲ್ಲ ತಮ್ಮ ಕೆಲ ಜಗಳಿಂದಾಗಿ ಪತ್ರಿಕೆಗಳಲ್ಲಿ ಗಮನ ಸೆಳೆದಿದ್ದಾರೆ. ರಾಜಕಾರಣಿಗಳಾದ ಮಹಿಳೆಯರು ಮತ್ತು ವಿಶಿಷ್ಟ ಮಹಿಳೆಯರನ್ನು ಬಿಟ್ಟರೆ ಪತ್ರಿಕೆಗಳಲ್ಲಿ ಜಾಗ ಪಡೆಯುವವರು ಚಿತ್ರತಾರೆಯರು. ಚಿತ್ರೋದ್ಯಮವೂ ಪತ್ರಿಕೆಗಳನ್ನು ಆಶ್ರಯಿಸುತ್ತದೆ. ಜನರ ಗಮನದಲ್ಲಿರುವುದು ಚಾಲ್ತಿಯಲ್ಲಿರುವುದು ಚಿತ್ರೋದ್ಯಮಕ್ಕೆ ಮುಖ್ಯವಾಗುವುದರಿಂದ ಚಿತ್ರತಾರೆಯರೂ ಪತ್ರಿಕೆಗಳೊಂದಿಗಿನ ಸಂಬಂಧದ ಬಗ್ಗೆ ವಿಶೇಷ ಎಚ್ಚರ ವಹಿಸುತ್ತಾರೆ. ಚಿತ್ರೋದ್ಯಮದ ಮಹಿಳೆಯರನ್ನು ಕುರಿತು ಬರೆಯುವುದರಲ್ಲಿಯೂ ಪತ್ರಿಕೆಗಳಲ್ಲಿ ಸಾಕಷ್ಟು ಬದಲಾವಣೆಗಳಾಗುತ್ತಿವೆ. ತಾರೆಯರ ವೈಯಕ್ತಿಕ ಜೀವನದ ಕಥೆಗಳ ಬಗ್ಗೆ ಜನರಿಗಿರುವ ವಿಪರೀತ ಕುತೂಹಲವನ್ನು ಕೂಡ ಪತ್ರಿಕೆಗಳು ತಣಿಸುತ್ತವೆ. ಜನರ ನಿರೀಕ್ಷೆಯಿಂದ ತುಂಬ ದೂರವಿದ್ದು ಉದ್ಯಮದಲ್ಲಿ ಯಶಸ್ವಿಯಾಗುವ ಸಾಧ್ಯತೆಯೇ ಇಲ್ಲ. ಜನರ ಬೇಕು ಬೇಡಗಳನ್ನು ಸಾಮಾನ್ಯ ಪತ್ರಿಕೋದ್ಯಮ ಸುಲಭವಾಗಿ ನಿರಾಕರಿಸಲು ಸಾಧ್ಯವೆ?

ಪತ್ರಿಕೆಗಳಲ್ಲಿ ಮಹಿಳಾ ಸಂಬಂಧಿಯಾದ ಯಾವ ವಿಷಯಗಳು ಹೇಗೆ ವರದಿಯಾಗುತ್ತವೆ, ಯಾವ ವಿಷಯಗಳನ್ನು ಪತ್ರಿಕೆಗಳು ಚರ್ಚೆಗೆ ಆರಿಸಿಕೊಳ್ಳುತ್ತವೆ ಎಂಬೆಲ್ಲ ವಿಷಯಗಳು ಮಹಿಳಾ ಚಳುವಳಿಯ ಮೇಲೆ ಪ್ರಭಾವ ಬೀರುತ್ತವೆ. ಸುಭಾಷಿತಗಳನ್ನು ಹಾಕುವುದರಿಂದ ಹಿಡಿದು ಛಾಯಾ ಚಿತ್ರಗಳಿಗೆ ವಿವರಗಳನ್ನು ಕೊಡುವವರೆಗೆ ಪತ್ರಿಕೆಗಳು ಮಹಿಳಾ ದೃಷ್ಟಿಯಿಂದ ತೆಗೆದುಕೊಳ್ಳುವ ಎಚ್ಚರವೂ ಕೂಡ ಪ್ರಭಾವಿಯಾಗಿರುತ್ತದೆ. ಆದರೆ ಈ ಆಯ್ಕೆ, ಎಚ್ಚರ ತನ್ನಿಂದ ತಾನೇ ನಿರ್ಣಯವಾಗುವುದಿಲ್ಲ. ಪತ್ರಿಕೆಯು ಎಡ ಪತ್ರಿಕೆಯೋ ಬಲಪತ್ರಿಕೆಯೋ, ಬಹುಸಂಖ್ಯಾತರದ್ದೋ ಅಲ್ಪಸಂಖ್ಯಾತರದ್ದೋ ಪತ್ರಿಕೆಯ ರಾಜಕೀಯ ಸಂಬಂಧಗಳೇನು, ಪತ್ರಿಕೋದ್ಯಮದಲ್ಲಿರುವವರ ಹಿನ್ನೆಲೆ, ದೃಷ್ಟಿಕೋನಗಳಾವವು ಎಂಬಿವೇ ಮೊದಲಾದ ಅಂಶಗಳು ಅದರ ಹಿಂದಿರುತ್ತವೆ. ಯಥಾ ಸ್ಥಿತಿಯನ್ನು ಉಳಿಸಿಕೊಳ್ಳಲು ಯತ್ನಿಸುವ ಪತ್ರಿಕೆಗಳ ಒತ್ತು, ಬಾಗುಗಳು ಬದಲಾವಣೆ ಬಯಸುವ ಪತ್ರಿಕೆಗಳಿಗಿಂತ ಬೇರೆಯಾಗುತ್ತವೆ.

ಮಹಿಳಾ ಚಳುವಳಿಯಲ್ಲಿರುವವರನ್ನು, ಮಹಿಳಾ ಗುಂಪುಗಳನ್ನು ಪತ್ರಿಕೆಗಳು ಹೇಗೆ ಸ್ವೀಕರಿಸುತ್ತವೆ ಎಂಬುದು ತುಂಬ ಮುಖ್ಯವಾದ ವಿಷಯಗಳಲ್ಲೊಂದು. 'ಓದುಗರು ವಿಷಯ ಸ್ವೀಕಾರದಲ್ಲಿ ತುಂಬ ನಿರ್ದಿಷ್ಟವಾಗಿರುತ್ತಾರೆ. ತಮ್ಮ ನಂಬಿಕೆಗೆ ಇಂಬುಕೊಡುವ ಸಂದೇಶಗಳನ್ನು ಸುಲಭವಾಗಿ

ಸ್ವೀಕರಿಸುತ್ತಾರೆ, ವಿರುದ್ಧ ಅಥವಾ ವಿಭಿನ್ನವಾದ್ದನ್ನು ತಿರಸ್ಕರಿಸುತ್ತಾರೆ ಅಥವಾ ಅಲಕ್ಷಿಸುತ್ತಾರೆ.' ಪತ್ರಿಕೆಗಳು ಯಾವ ಅರ್ಥದಲ್ಲಿ ಸುದ್ದಿ ವಿಶ್ಲೇಷಣೆಯನ್ನ ಕೊಡುತ್ತವೆಯೋ ಅದಕ್ಕಿಂತ ಭಿನ್ನವಾದ ರೀತಿಯಲ್ಲಿ ಜನ ಅದನ್ನು ತೆಗೆದುಕೊಳ್ಳಬಹುದು: ಇಂಥ ಸೂಕ್ಷ್ಮಗಳನ್ನು ಗಮನಿಸಿ ಅವುಗಳನ್ನು ಗೆದ್ದು ಚಳುವಳಿಯಲ್ಲಿರುವವರ ಬಗ್ಗೆ ಪತ್ರಿಕೆಗಳು ರೂಢಿಸುವ ಅಭಿಪ್ರಾಯ, ಕಟ್ಟುವ ಚಿತ್ರ ಮಹಿಳಾ ಚಳುವಳಿಯ ಪ್ರಕ್ರಿಯೆಯಲ್ಲಿ ಹಲವು ನಿಟ್ಟಿನಿಂದ ಪ್ರಭಾವ ಬೀರುತ್ತವೆ.

ಮಹಿಳಾ ದೃಷ್ಟಿಕೋನದ ತಾತ್ವಿಕತೆ, ಒಂದು ಸೈದ್ಧಾಂತಿಕ ನಿಲುವು ಇಲ್ಲದೆ ಹೋದರೆ ಪತ್ರಿಕೆ ಒಂದು ಹಾಸ್ಯಾಸ್ಪದ ಮಿಶ್ರಣವಾಗುತ್ತದೆ, ಸಂಪಾದಕೀಯಕ್ಕೂ ವರದಿಗೂ ಶೀರ್ಷಿಕೆಗೂ ವ್ಯಂಗ್ಯಚಿತ್ರಗಳಿಗೂ ಭಾಷೆಗೂ ಒಂದು ಹೊಂದಾಣಿಕೆ ಇರುವುದಿಲ್ಲ. ತೋರಿಕೆಗೆ ಪ್ರಗತಿಯನ್ನು ಒಪ್ಪಿಕೊಂಡರೆ ಮಹಿಳಾ ಪ್ರತಿಮೆಗಳಲ್ಲಿ ದ್ವಂದ್ವ ಕಾಣುತ್ತದೆ. ಬರೀ 'ಮಹಿಳೆಯರ ಮೇಲೆ' ಅಥವಾ 'ಮಹಿಳೆಯರಿಂದ' ಎಂಬುದು ಪತ್ರಿಕೆಯ ಧೋರಣೆಯಾದರೆ ಸಾಲದು. ಅದಕ್ಕೆ ದೃಷ್ಟಿಕೋನ ಅಗತ್ಯ, ಮಹಿಳೆಯರನ್ನು ಕುರಿತ ಸಾಂಪ್ರದಾಯಿಕ ಭೋಗದೃಷ್ಟಿ ಮತ್ತು ಸ್ತ್ರೀವಾದ ಒಟ್ಟಿಗೆ ಹೋಗುವುದು ಸಾಧ್ಯವಿಲ್ಲ, ಒಮ್ಮೊಮ್ಮೆ ಅಂಥ ಮಿಶ್ರಣವನ್ನು ಮುಂದಿಟ್ಟರೆ ಓದುಗರು ಗೊಂದಲಕ್ಕೊಳಗಾಗುತ್ತಾರೆ ಅಥವಾ ಅಭ್ಯಾಸವಾದ್ದನ್ನೇ ಸುಲಭವಾಗಿ ಆರಿಸಿಕೊಂಡು ನೆಮ್ಮದಿ ಪಡೆಯುತ್ತಾರೆ. ಒಂದು ವೇಳೆ ಸಮಾಜದಲ್ಲಿರುವ ಮಿಶ್ರಧೋರಣೆಯನ್ನು ಪತ್ರಿಕೆ ಯಥಾವತ್ತಾಗಿ ಬಿಂಬಿಸಬೇಡವೆ ಎಂದರೆ ಪಕ್ಷಪಾತವಿಲ್ಲದೆಯೆ ವಿಭಿನ್ನ ನಿಲವನ್ನು ಬಿಂಬಿಸಲಾಗಿದೆಯೆ ಎಂಬುದು ಒಂದು ಪ್ರಶ್ನೆಯಾದರೆ ಸಾಮಾಜಿಕ ಬದಲಾವಣೆಯನ್ನು ಆಶಿಸುವ ಪತ್ರಿಕೆ ಕೇವಲ ಕನ್ನಡಿಯಲ್ಲ ಎಂಬ ಅಂಶವೂ ಇದೆ.

ಮಹಿಳಾ ಪ್ರಶ್ನೆಯನ್ನು ಪತ್ರಿಕೆಗಳು ತಿರುಚಿಬಿಡಬಹುದು. 1887ರ 'ಇಲ್ಲಸ್ಟ್ರೇಡ್ ವೀಕ್ಲಿ'ಯ 'ಅವರ್ ಇಂಡಿಯಾ' ಕಾಲಂನಲ್ಲಿ ಮಹಿಳಾ ಪೋಲೀಸ್ ಠಾಣೆಯ ಬಗ್ಗೆ ಇತ್ಯಾತ್ಮಕವಾದ ಬರಹವಿತ್ತು. ಆದರೆ ಹಿನ್ನೆಲೆಯಲ್ಲಿದ್ದ ಚಿತ್ರದಲ್ಲಿ ಒಬ್ಬ ಸ್ಥೂಲಕಾಯದ, ದುಷ್ಟೆಯಾಗಿದ್ದ ಪೋಲೀಸ್ ಹೆಂಗಸಿನ ಕೈಯಲ್ಲಿ ಲಟ್ಟಣಿಗೆ ಇತ್ತು ಮತ್ತು ನಿರಪರಾಧಿಭಾವದ ಗಂಡಸನ್ನು ಕೊಡಲಾಗಿತ್ತು. ಇದರ ಸಂದೇಶವೇನು? ಈ ತಿರುಚು ಶೀರ್ಷಿಕೆಗಳಿಂದಲೂ ಬರಬಹುದು. 1996ರಲ್ಲಿ ಮೈಸೂರಿನಲ್ಲಿ 'ಸಮಾನ ನಾಗರಿಕ ಸಂಹಿತೆ'ಯನ್ನು ಕುರಿತು ಒಂದು ಸಂಕಿರಣ ನಡೆಯಿತು. ಮಹಿಳಾ ಭಾಷಣಕಾರರು ಮತ್ತು ಬಹುತೇಕ ಮಹಿಳಾ ಭಾಗಿಗಳು ಮತ್ತು ಬಹಳ ಸ್ಪಷ್ಟವಾಗಿ ಸಮಾನ ನಾಗರಿಕ ಸಂಹಿತೆಯ ಪರವಾಗಿದ್ದರೂ ಸಮಾನ ನಾಗರಿಕ ಸಂಹಿತೆಯ ಮೂಲಾಂಶವೇ ತಿಳಿಯದೇ ಮಾತನಾಡಿದವರದ್ದೇ ಪತ್ರಿಕೆಗೆ ಮುಖ್ಯವಾಯಿತು. 'ಸಮಾನ ನಾಗರಿಕ ಸಂಹಿತೆ ಈಗ ಬೇಕಿಲ್ಲ' ಎಂಬ ಶೀರ್ಷಿಕೆಯಡಿಯಲ್ಲಿ ಈ ಕಾರ್ಯಕ್ರಮದ ವರದಿ ಬಂತು. 'ನ್ಯೂಯಾರ್ಕ್ ಟೈಂಸ್' ಒಂದು ಸಾರಿ 'ಮೆನಿ ಯಂಗ ವಿಮೆನ್ ನೌಸೇ ದೇ ಉಡ್ ಪಿಕ್ ಫ್ಯಾಮಿಲಿ ಓವರ್ ಕೆರಿಯರ್' ಎಂಬ ಶೀರ್ಷಿಕೆ ಕೊಟ್ಟು ಒಂದು ಸಮೀಕ್ಷೆಯನ್ನು ಪ್ರಕಟಿಸಿತು. ಆ ಸಮೀಕ್ಷೆಯ ಪ್ರಕಾರ ಶೇ. 27 ತಾಯಂದಿರು ಐದು ವರ್ಷದೊಳಗಿನ ತಾಯಂದಿರು ಹೊರಗೆ ಕೆಲಸ ಮಾಡಬಾರದು ಎಂದಿದ್ದರು. ಶೇ. 50 ತಾಯಂದಿರು ಒಪ್ಪೊತ್ತಿನ ಕೆಲಸ ಮಾಡಬೇಕು ಎಂದಿದ್ದರು. ಶೇ. 16 ತಾಯಂದಿರು ಈ ಅವಧಿಯಲ್ಲಿ ಕೂಡ ತಾಯಂದಿರು ಪೂರ್ಣಾವಧಿಯ ಹೊರಗಿನ ಕೆಲಸವನ್ನು ಮಾಡಬೇಕು ಎಂದಿದ್ದರು. ವಸ್ತುಸ್ಥಿತಿ ಹೀಗಿರುವಾಗ ಮೇಲಿನ ಶೀರ್ಷಿಕೆ ಎಷ್ಟು ಸರಿ? ರಾಮಿಚ್ಚಾಬ್ರಾ ಅವರು ಈ ದಿಕ್ಕಿನ ತಮ್ಮ ಒಂದು ಅನುಭವವನ್ನು ನಿರೂಪಿಸಿದ್ದಾರೆ. ಮೆಕ್ಸಿಕೋದಲ್ಲಿ ನಡೆದ ಅಂತರ್ರಾಷ್ಟ್ರೀಯ ಮಹಿಳಾ ಸಮ್ಮೇಳನಕ್ಕೆ ಹೋಗಿ ವರದಿ ಮಾಡಲು ಈ ಲೇಖಕಿಗೆ ಯುನೈಟೆಡ್ ನೇಷನ್ಸ್‌ನಿಂದ ನೆರವು ದೊರೆಯಿತು. 'ಏನು ಮಹಿಳೆಯರ ಮೇಲೆ ಯುಎಸ್‌ನ ಒಂದು ಸಮ್ಮೇಳನವೇ?' ಎಂದು ಒಬ್ಬ ಸಂಪಾದಕ ಆಶ್ಚರ್ಯಪಟ್ಟರು. ಉದ್ಘಾಟನೆಯ ಸ್ವಲ್ಪಭಾಗವನ್ನು ವರದಿ ಮಾಡಬಹುದು ಎಂದರು. 'ಅದರ ಫಲಿತಾಂಶವನ್ನು ವರದಿ ಮಾಡಬೇಡವೇ' ಎಂದಾಗ 'ಸ್ವಲ್ಪೇ ಸ್ವಲ್ಪ, ಅದರ ತೀರ್ಮಾನಗಳ ಬಗ್ಗೆ' ಎಂದರು.

'ಒಂಮ್ಮೊಮ್ಮೆ ಆ ಮೂರು ವಾರದ ಅವಧಿಯಲ್ಲಿ ಏನಾದರೂ ಮುಖ್ಯವಾದ ಬೆಳವಣಿಗೆಗಳಿದ್ದರೆ?' ಎಂದು ಕೇಳಿದ್ದಕ್ಕೆ 'ಹುಂ ಒಂದೋ ಎರಡೋ ಭಾಗ, ಪತ್ರಿಕೆ ಅದರಿಂದಲೇ ತುಂಬಿಹೋಗುವುದು ನಮಗೆ ಬೇಡ' ಎಂದರು. ಆಮೇಲೆ ಮಿಚ್ಚಾಬ್ರಾ ಜೆರೆಕ್ಸ್‌ನಲ್ಲಿ ಕಳಿಸಿದ್ದನ್ನೆಲ್ಲ ಹಾಕಿದರು. ಕೊನೆಗೆ ಮಹಿಳೆಯರ ಸ್ಥಿತಿಯನ್ನು ಸುಧಾರಿಸುವ ವಿಷಯದಲ್ಲಿ ಸಮ್ಮೇಳನ ಮಾಡಿದ ಶಿಫಾರಸ್ಸುಗಳನ್ನು ಕುರಿತ ಬರಹ ಪಾಠದ ಸಂಚಿಕೆ ವಿಭಾಗಕ್ಕೆ ಹೋಯಿತು, ಅದರ ಶೀರ್ಷಿಕೆ 'ವಿಮೆನ್ಸ್ ಲಿಬ್' ಅಂಡ್ ಆಲ್ ದಡ್' ಎಂದಾಯಿತು. ಬೆಂಗಳೂರಿನಲ್ಲಿ ನಡೆದ ವಿಶ್ವಸುಂದರಿ ಸ್ಪರ್ಧೆಯ ಸಂದರ್ಭದಲ್ಲಿ ಹಲವು ಪತ್ರಿಕೆಗಳು ಮಹಿಳೆಯರನ್ನು ಕುರಿತ ತಮ್ಮ ಅಂತರಂಗದ ಧೋರಣೆಯನ್ನು ಸ್ಪಷ್ಟವಾಗಿ ಬಹಿರಂಗ ಪಡಿಸಿದವು.

ಮಹಿಳಾ ವಿಷಯಗಳನ್ನು ಕುರಿತ ಸಾರ್ವಜನಿಕ ಮನೋಭಾವವನ್ನು ತಿಳಿಯುವಲ್ಲಿಯೂ ಪತ್ರಿಕೆಗಳು ತುಂಬ ಉಪಯುಕ್ತ 'ಕಾನೂನು ಸಲಹೆ' ಎಂಬ 17-12-95ಕ್ಕೆ ತರಂಗ ಪತ್ರಿಕೆಯ ವಿಭಾಗಕ್ಕೆ ಒಂದು ಹುಡುಗ ಕೇಳಿದ ಪ್ರಶ್ನೆ ಹೀಗಿತ್ತು. 'ಹದಿನಾರು ವರ್ಷದ ಹುಡುಗಿಯನ್ನು ಪ್ರೀತಿಸಿದ್ದೇನೆ, ಏಕಾಂತದಲ್ಲಿ ಸಂಧಿಸಿದ್ದೇನೆ, ಕೈಬಿಟ್ಟರೆ ಆತ್ಮಹತ್ಯೆಯೆಂದು ಹುಡುಗಿಯ ಬೆದರಿಕೆ. ನಾನು ಸರ್ಕಾರಿ ನೌಕರಿಯಲ್ಲಿದ್ದೇನೆ, ಮದುವೆ ಕಾನೂನು ಬಾಹಿರವಲ್ಲವೆ?' ಇದಕ್ಕೆ ನಮ್ಮ ಕಾನೂನು ತಜ್ಞರು ಕೊಟ್ಟ ಉತ್ತರ ಇದು: 'ಪ್ರೇಮಕ್ಕೆ ವಯಸ್ಸಂದಿಗೂ ಅಡ್ಡಿಯಾಗುವುದಿಲ್ಲ. ಮದುವೆಯಾಗಲು 18 ವಯಸ್ಸು

ಹುಡುಗಿಗೆ ದಾಟಿರಬೇಕು, ಏಕಾಂತದಲ್ಲಿ ನೀವೇನು ಮಾಡಿಕೊಂಡರೂ ಕಾನೂನು ಅದನ್ನು ಪ್ರಶ್ನಿಸುವುದಿಲ್ಲ. ಆದ್ದರಿಂದ ಇನ್ನು ಎರಡು ವರ್ಷಗಳ ಕಾಲ ನೀವು ಅವಳೊಂದಿಗೆ ಪ್ರೇಮ ಮುಂದುವರಿಸಬಹುದು. ಈ ಮೊದಲಿನ ವಿವಾಹವು ಕಾನೂನಿನ ದೃಷ್ಟಿಯಿಂದ ಅಸಿಂಧುವಾಗುವ ಕಾರಣ ನೀವು ಆಮೇಲೆ ಅವಳನ್ನು ನಿರಾಕರಿಸಿದರೆ ಯಾವುದೇ ತೊಂದರೆ ಉದ್ಭವಿಸುವುದಿಲ್ಲ. ಚಿ.ನ. ಮಂಗಳಾ ಅವರು ಭಾರತೀಯ ಸ್ತ್ರೀಯನ್ನು ಕುರಿತು ಬರೆದ ಲೇಖನ ಮಾಲೆಗೆ 14-11-1996ರ ಪತ್ರಿಕೆಯಲ್ಲಿ ಒಬ್ಬ ಓದುಗರು ಹೀಗೆ ಪ್ರತಿಕ್ರಿಯಿಸಿದ್ದಾರೆ 'ಭಾರತೀಯರ ಸ್ತ್ರೀಯರ ಜೀವನಗಾಥೆ ಇಂದಿನ ಮಹಿಳೆಯರಿಗೂ ದಾರಿದೀಪವಾಗಲಿ, ಇಲ್ಲಿಯ ಮೌಲಿಕ ಸಂಸ್ಕೃತಿಯ ಸ್ತ್ರೀ ಸ್ವಾತಂತ್ರ್ಯ ಎಂದಿಗೂ ಸ್ವೇಚ್ಛಾಚಾರ ಮತ್ತು ಲೈಂಗಿಕತೆಗೆ ತಿರುಗದಿರಲಿ'. 'ಮಹಿಳೆಯ ನಿಜ ಶತ್ರುಗಳಾರು' ಎಬ ಪ್ರಶ್ನೆಗೆ 10-12-1996ರ ಸುಧಾ ಪತ್ರಿಕೆಯಲ್ಲಿನ ಉತ್ತರ 'ಅಹಂಕಾರ, ಕನ್ನಡಿ' ಶತ್ರುಗಳಾಗಬಹುದು ಆದರೆ ನಮ್ಮ ಸಾಮಾಜಿಕ ಹಿನ್ನೆಲೆ, ಮೌಲ್ಯ ವ್ಯವಸ್ಥೆಗಳ ಬಗ್ಗೆ ಯಾವ ಸೂಚನೆಯೂ ಇಲ್ಲಿಲ್ಲ.

ಪತ್ರಿಕೆಗಳು ಬದಲಾಗುತ್ತಿರುವ ಮಹಿಳಾ ಸಂಬಂಧಿ ಮೌಲ್ಯಗಳನ್ನೂ ತೆರೆದುಕೊಳ್ಳುತ್ತಿರುವ ಸಮಾಜದ ಸಂವೇದನೆಯನ್ನೂ ಪ್ರತಿಬಿಂಬಿಸಬಹುದು. 'ಸ್ಯಾವಿ' ಪತ್ರಿಕೆಗೆ ನಟಿ ಜಯಂತಿಯು ನೀಡಿದ ಜೀವನ ನಿರೂಪಣೆಯ ಬಿಚ್ಚುತನ ಓದುಗರನ್ನು ಬೆರಗಾಗಿಸಿತು. 13 ಮತ್ತು 20-12-95ರ ಲಂಕೇಶ್ ಪತ್ರಿಕೆ ಅದರ ಸಾರವನ್ನು 'ನನ್ನ ಜೀವನದ ಗಂಡಸರು' ಎಂದು ಕನ್ನಡಕ್ಕೆ ತಂದಾಗ ಮಹಿಳೆಯಿಂದ ಸಮಾಜ ಸಾಮಾನ್ಯವಾಗಿ ನಿರೀಕ್ಷಿಸುವ ಜೀವನ ವಿಧಾನ ಮತ್ತು ನಡವಳಿಕೆಗಿಂತ ಜಯಂತಿಯವರ ಜೀವನ ವಿಭಿನ್ನವಾಗಿದ್ದರೂ ಪರಂಪರೆಯ ಲಕ್ಷ್ಮಣರೇಖೆಗಳನ್ನು ದಾಟಿದ್ದರೂ ಆಕೆಯ ಜೀವನದ ದುಃಖ, ನೋವುಗಳಿಗೆ ಸ್ಪಂದಿಸಿದ ಓದುಗರಿಂದ ಜಯಂತಿರವರ ಬಗೆಗೆ ಸಹಾನುಭೂತಿಯೇ ಹರಿದುಬಂದಿತು. 'ಜಯಂತಿ ರಿಯಲೀ ಗ್ರೇಟ್' ಎಂಬಂಥ ಪ್ರತಿಕ್ರಿಯೆಗಳೂ ಬಂದವು.

ಮಹಿಳಾ ಸಂಬಂಧಿ ವಿಷಯಗಳು ಎಲ್ಲ ಪತ್ರಿಕೆಗಳಲ್ಲಿ ಪಡೆಯುವ ಜಾಗವೇ ಅಲ್ಲದೆ ಮಹಿಳಾ ಅಂಕಣಗಳು, ಮಹಿಳಾ ಪುಟಗಳು, ಮಹಿಳಾ ವಿಭಾಗಗಳು ಇವೆ. ಮೀಸಲು ಪುಟ, ಮೀಸಲು ಜಾಗಗಳನ್ನಿಡುವುದರಿಂದ ಸಾಮಾನ್ಯ ಓದುಗರು ಈ ಪುಟಗಳನ್ನು ಓದದೆ ಇರುವ ಅಪಾಯ ಇದೆ ಎಂಬ ಅಭಿಪ್ರಾಯವೂ ಇದೆ. ಆದರೆ ಹಾಗೆ ಜಾಗಗಳನ್ನಿಡದಾಗ ಮಹಿಳಾ ಸಂಬಂಧಿ ವಿಷಯಗಳು ಜಾಗವನ್ನೇ ಪಡೆಯದೆ ಇರಬಹುದು. ನಿರ್ದಿಷ್ಟ ವಿಷಯಗಳನ್ನು ಕುರಿತ ಮಹಿಳಾ ಪತ್ರಿಕೆಗಳಿವೆ. 'ಹೆಲ್ತ್ ಫಾರ್ ಮಿಲಿಯನ್ಸ್' ಎಂಬ ಪತ್ರಿಕೆ ಮಹಿಳೆಯರ ಆರೋಗ್ಯಕ್ಕೆ ಸಂಬಂಧಿಸಿದ ಪತ್ರಿಕೆ ಮಹಿಳಾ ಅಧ್ಯಯನ ಕೇಂದ್ರಗಳು, ಮಹಿಳಾ ಸಂಶೋಧನಾ ಕೇಂದ್ರಗಳು ಪತ್ರಿಕೆಗಳನ್ನು ತರುತ್ತಿವೆ. ದೆಹಲಿಯ 'ಸೆಂಟರ್ ಫಾರ್ ವಿಮೆನ್ಸ್ ಡೆವಲಪ್‌ಮೆಂಟ್'ನ ವಾರ್ತಾಪತ್ರಗಳು, ಎಸ್‌ಎನ್‌ಡಿಟಿಯ ಸಾಮ್ಯಶಕ್ತಿಯೇ ಮೊದಲಾದವು ಮಹಿಳಾ ಅಧ್ಯಯನ ವಲಯಗಳಲ್ಲಿ ಪರಿಚಿತವಾಗಿವೆ. ಇಪಿಡಬ್ಲ್ಯೂ, ಮೇನ್ ಸ್ಟ್ರೀಮ್ ಮೊದಲಾದ ಪತ್ರಿಕೆಗಳು ಸಾಕಷ್ಟು ಮಹಿಳಾ ಸಂಬಂಧಿ ಲೇಖನ, ಸಮೀಕ್ಷೆ, ಸಂಪಾದಕೀಯಾದಿಗಳನ್ನು ಹೊಂದಿವೆ. ಅತ್ಯಾಚಾರ, ಸ್ತ್ರೀಭ್ರೂಣಹತ್ಯೆ, ಗರ್ಭನಿರೋಧಕಗಳು, ಕಾನೂನು ಬದಲಾವಣೆಯೇ ಮೊದಲಾದ ವಿಷಯಗಳು ಇಂಥ ಪತ್ರಿಕೆಗಳಲ್ಲಿ ಹೆಚ್ಚಿನ ಗಮನ ಸೆಳೆದಿವೆ. ಕನ್ನಡದಲ್ಲಿ ಸುಧಾ, ತರಂಗ, ಸಂಕ್ರಮಣ, ಸಂವಾದ, ಶೂದ್ರ, ಇಬ್ಬನಿ ಮೊದಲಾದ ಪತ್ರಿಕೆಗಳಲ್ಲೂ ಆಗಾಗ ಮಹಿಳಾ ಪ್ರಶ್ನೆ ಚರ್ಚೆಗೆ ಬರುತ್ತಲೇ ಇರುತ್ತದೆ.

'ವಾಣಿಜ್ಯೋದ್ದೇಶಿತ ಮಹಿಳಾ ಪತ್ರಿಕೆ'ಗಳು ಒಂದು ರೀತಿಯಲ್ಲಿ ಪತ್ರಿಕೋದ್ಯಮದ ಅಸ್ಪೃಶ್ಯರು ಎಂಬುದು ಇಂಥ ಪತ್ರಿಕೆಗಳ ಸ್ಥಿತಿಯನ್ನು ಕುರಿತ ಅಮ್ಮು ಜೋಸೆಫ್ ಅವರ ವರ್ಣನೆ, ಈ ಪತ್ರಿಕೆಗಳು ವೃತ್ತಿನಿರತ ಪತ್ರಿಕೋದ್ಯಮಗಳಿಂದ ಬಹುತೇಕ ಅಲಕ್ಷ್ಯಕ್ಕೀಡಾಗುತ್ತವೆ, ಉಳಿದವರಿಗೆ ಅವು ಅಷ್ಟು ಮುಖ್ಯವಲ್ಲ. ಮಹಿಳಾ ಗುಂಪುಗಳಿಂದಲೂ ಈ ಪತ್ರಿಕೆಗಳು ವಿಮರ್ಶೆ ಎದುರಿಸುತ್ತವೆ. ಈ ಪತ್ರಿಕೆಗಳು 'ಮುಖ್ಯ ಪ್ರವಾಹ'ದ ಪತ್ರಿಕೋದ್ಯಮದಿಂದ ಕೆಳಹಂತದಲ್ಲಿವೆಯೆಂದು ಪರಿಗಣಿತವಾಗಿವೆ. ಈ ಪತ್ರಿಕೆಗಳು 'ಬಂಡವಾಳಶಾಹಿ ಪಿತೃಪ್ರಧಾನತೆ'ಯು ನಡೆಸುವ ಹುನ್ನಾರದಲ್ಲಿ ಶಾಮೀಲಾಗಿವೆಯೆಂಬ ಗ್ರಹಿಕೆಯ ಹಿನ್ನೆಲೆಯಲ್ಲಿ ಈ ಪತ್ರಿಕೆಗಳ ಸ್ವರೂಪವನ್ನು ಗಮನಿಸಬಹುದು. ಎಪ್ಪತ್ತರ ದಶಕದಲ್ಲಿ ಮಹಿಳಾ ಸಂಬಂಧಿಯಾದ ಗಂಭೀರ ಪ್ರಕರಣಗಳ ಬಗ್ಗೆ ಗಮನಕೊಟ್ಟವಾದರೂ ಎಂಬತ್ತರ ದಶಕದಿಂದೀಚೆಗೆ ವಾಣಿಜ್ಯ ಒತ್ತಡಗಳು ಹೆಚ್ಚಿವೆ. ರೂಢಿಗತ ಪಾತ್ರಗಳನ್ನು ಬಿಡದೆ ಹೊರಗೂ ದುಡಿಯುವ ಮಹಿಳೆಯು ಎರಡೂ ಕ್ಷೇತ್ರಗಳಲ್ಲಿ ಏಕಕಾಲಕ್ಕೆ ಯಶಸ್ವಿಯಾಗುವುದರತ್ತ ಲಕ್ಷ್ಯ ಕೊಡಲು ಯತ್ನಿಸಿವೆ. ಹೆಂಗಸರ ದೇಹದ ಮಾಟ, ಅಲಂಕಾರ, ಊಟ-ಉಡುಗೆ, ಕೌಟುಂಬಿಕ ಜವಾಬ್ದಾರಿಗಳು, ಗೃಹಾಲಂಕಾರವೇ ಮೊದಲಾದವಕ್ಕೆ ಆದ್ಯತೆ. ಅಲ್ಲಲ್ಲಿ ಮಹಿಳಾ ಸಾಧಕರು, ಮಹಿಳಾ ಸಮಸ್ಯೆ, ಮಹಿಳಾ ಸಂಬಂಧಿ ವಿಷಯಗಳ ವಿವರಣೆ, ವಿಶ್ಲೇಷಣೆ ಇದೆ. ಮಧ್ಯಮ ಹಾಗೂ ಮೇಲುವರ್ಗಗಳ ಮಹಿಳಾ ಓದುಗರನ್ನು ಉದ್ದೇಶದಲ್ಲಿಟ್ಟುಕೊಂಡ ಈ ಪತ್ರಿಕೆಗಳು 'ಮಹಿಳೆಯರಲ್ಲಿ ಆತ್ಮವಿಶ್ವಾಸ, ಪ್ರಾಪಂಚಿಕ ಜ್ಞಾನ, ಅಭಿವ್ಯಕ್ತಿ ರೂಢನೆ'ಯೇ ಮೊದಲಾದ ಕೆಲವಾದರೂ ಇತ್ಯಾತ್ಮಕ ಬದಲಾವಣೆಗಳನ್ನು ತಂದಿದೆಯೆಂಬುದನ್ನು ಈ ಪತ್ರಿಕೆಗಳ ಅಧ್ಯಯನ ಹೇಳಿದೆ.

ಕರ್ನಾಟಕದಲ್ಲಿ ಮಹಿಳಾಗುಂಪುಗಳ ಮಹಿಳಾ ಪತ್ರಿಕೆಗಳು ಎಪ್ಪತ್ತರ ದಶಕದಿಂದಲೇ ಪ್ರಾರಂಭವಾದರೂ ಹೆಚ್ಚು ಜನರನ್ನು ತಲುಪುವ ಸಮಗ್ರತೆಯುಳ್ಳ ಪತ್ರಿಕೆ ಇಲ್ಲವಾಗಿದೆ.

ವಾಣಿಜ್ಯೋದ್ದೇಶಿತ ಪತ್ರಿಕೆಗಳಿಗಿಂತ ಈ ಪತ್ರಿಕೆಗಳು ದೊಡ್ಡ ಜನಸಮುದಾಯಗಳನ್ನು ತಲುಪಬೇಕಾದ ತುರ್ತಿದೆ. ಮಹಿಳಾಗುಂಪುಗಳು, ಅನುದಾನ ಪಡೆದ ಮಹಿಳಾ ಗುಂಪುಗಳು, ಸರ್ಕಾರದ ಮಹಿಳಾ ಘಟಕಗಳು ವಾರ್ತಾಪತ್ರಗಳನ್ನು ಅನಿಯತವಾಗಿ ಅಥವಾ ನಿಯತವಾಗಿ ತರುತ್ತಿವೆಯಾದರೂ ದಶಕದಾಟಿಯೂ ಆದಷ್ಟೂ ನಿಯತವಾಗಿ ಬರುತ್ತಿರುವ ಕನ್ನಡ ಮಹಿಳಾ ಪತ್ರಿಕೆಗಳು 'ಅಚಲ' ಮತ್ತು 'ಮಾನಸ'.

ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳು ಮಹಿಳಾಪರ ಕೆಲಸಗಳನ್ನು ಬೇರೆ ಬೇರೆ ರೀತಿಯಲ್ಲಿ ರೂಪಿಸಿಕೊಳ್ಳುತ್ತಿರುವಾಗ ವ್ಯಾಪಕ ಶಕ್ತ ಮಹಿಳಾ ಪತ್ರಿಕೆಯ ಅಗತ್ಯ ತೀವ್ರವಾಗಿದೆ. ಇಂದು ಮಹಿಳೆಯರಿಗೆ ತೀರ ಅಗತ್ಯವಾಗಿರುವ ರಾಜಕೀಯ ಸಾಕ್ಷರತೆ, ಕಾನೂನು ಸಾಕ್ಷರತೆ, ವೈದ್ಯಕೀಯ ಸಾಕ್ಷರತೆಗಳನ್ನು ವ್ಯಾಪಕವಾಗಿ ಹರಡಲು ಶಿಕ್ಷಣ, ಉದ್ಯೋಗದ ಅವಕಾಶಗಳ ಬಗೆಗಿನ ಮಾಹಿತಿಗಳನ್ನು ಒಳಗೊಂಡಂತೆ ಈ ಪತ್ರಿಕೆ ಕನ್ನಡ ಮಹಿಳೆಯರ ಸಂಗಾತಿಯಾಗಬೇಕು. ಮಹಿಳೆಯರಿಗೆ ಸಂಬಂಧಿಸಿದ ವಿದ್ಯಮಾನಗಳಿಗೆ ತಕ್ಷಣದ ಪ್ರತಿಕ್ರಿಯೆ, ವಿಮರ್ಶೆಗೆ ಈ ಪತ್ರಿಕೆ ಅಂಗಳವಾಗಬೇಕು. ಜನಾಂದೋಲನದ ಬಹುಮುಖ್ಯ ಅಂಗ ಜನಾಭಿಪ್ರಾಯ ರೂಢನೆ. ಮಹಿಳೆಯರ ವಿಷಯವಾಗಿ ಇಂಥ ಇತ್ಯಾತ್ಮಕ ಅಭಿಪ್ರಾಯ ರೂಢನೆಗೆ ಒಂದು ಪತ್ರಿಕೆ ತನ್ನನ್ನು ಇಟ್ಟುಕೊಂಡರೆ ಮಹಿಳಾ ಚಳುವಳಿಯು ನಗರದ, ಕೆಲವೇ ಕೆಲವು ವರ್ಗಗಳನ್ನು ತಲುಪುವ ದುರಂತವನ್ನು ಗೆದ್ದು ಬಹುಜನರನ್ನು ತಲುಪಬಹುದು. ಮಹಿಳೆಯರ ವಿಷಯಗಳನ್ನು ಪ್ರತ್ಯೇಕವಾಗಿಯಷ್ಟೇ ನೋಡದೆ ಜನಜೀವನ, ಸಮಾಜದೊಂದು ಭಾಗದೊಂದಿಗೆ ಸಮಗ್ರವಾಗಿ ನೋಡುವುದರಿಂದಾಗಿ ಆ ಪತ್ರಿಕೆ ಮಹಿಳೆಯರಂತೆಯೇ ಪುರುಷರನ್ನೂ ಉದ್ದೇಶಿಸಿದ್ದು ಇಬ್ಬರಿಗೂ ಅರ್ಥಪೂರ್ಣವಾಗಬೇಕು.

ಇಂಥ ಪತ್ರಿಕೆ ಮಹಿಳಾ ಗುಂಪುಗಳ ಚಟುವಟಿಕೆಗಳನ್ನು ಸಮೀಕ್ಷಿಸಿ, ವಿಮರ್ಶಿಸುತ್ತಾ ಮಹಿಳಾ ಗುಂಪುಗಳನ್ನು ಒಟ್ಟಿಗೆ ತರುವ ಕೆಲಸವನ್ನೂ ಮಾಡುತ್ತಾ ಮಹಿಳಾ ಚಳುವಳಿಯನ್ನು ಬಲಗೊಳಿಸಬೇಕು. ಯಾವುದೇ ಪ್ರಕರಣದ ಬಗ್ಗೆ ಎದ್ದ ವಿರೋಧ, ಸಂಘರ್ಷವು ಮುಂದೇನಾಯಿತು ಎಂಬುದರ ಬಗ್ಗೆಯೂ ಕಣ್ಣಿಟ್ಟಿರಬೇಕು ಆಗ ಮಾತ್ರ ಕಾಲಕಾಲಕ್ಕೆ ಈ ಚಟುವಟಿಕೆಗಳ ಪುನರಾವಲೋಕನ, ಆತ್ಮಾವಲೋಕನ ಸಾಧ್ಯವಾಗುತ್ತದೆ. ಅಗತ್ಯವಿದ್ದೆಡೆ ಈಗಿನ ಪತ್ರಿಕೆಗಳು ಗಮನಕೊಡುತ್ತಿರುವ ಚರಿತ್ರೆ, ವ್ಯಕ್ತಿ ಚಿತ್ರ, ಅನುವಾದಗಳು ಮುಂದುವರಿದರೂ ಸರ್ಕಾರ ಮತ್ತು ಮಹಿಳಾಗುಂಪುಗಳಿಗೆ ವಿಮರ್ಶೆ, ಮಾರ್ಗದರ್ಶನವನ್ನು ಒದಗಿಸಬೇಕಾದ ಅಗತ್ಯವಿದೆ. ನಮ್ಮ ಕ್ರಿಯಾಯೋಜನೆಗಳಲ್ಲಿ ಅಡಗಿರುವ ರೂಢಿಗತ ಲಿಂಗವ್ಯವಸ್ಥೆಯ ಪೂರ್ವಗ್ರಹಗಳನ್ನು ಅಲ್ಲಲ್ಲೇ ತೋರುವಷ್ಟು ಪತ್ರಿಕೆ ಚುರುಕಾಗಿದ್ದರೆ ಜನರಲ್ಲಿ, ಆಡಳಿತಾಂಗದಲ್ಲಿ ಎಚ್ಚರ ಜಾಗೃತವಾಗುತ್ತದೆ.

ಸಾಮಾನ್ಯವಾಗಿ ಮಹಿಳಾ ಪತ್ರಿಕೆಗಳು ಕೇವಲ ಪತ್ರಿಕೆಗಳಾಗಿಲ್ಲ. ಚಳುವಳಿಯ ಒಂದು ಭಾಗವಾಗಿ ಪತ್ರಿಕೋದ್ಯಮವನ್ನು ಆರಿಸಿಕೊಳ್ಳಲಾಗಿದೆ. ಈ ಪತ್ರಿಕೆಗಳನ್ನು ತರುತ್ತಿರುವವರು ಪತ್ರಿಕೆಯೊಂದಿಗೆ ಮಹಿಳಾ ಚಳುವಳಿಗೆ ಸಂಬಂಧಿಸಿದ ಕೆಲಸಗಳನ್ನು ಮಾಡುತ್ತಿದ್ದಾರೆ ಮತ್ತು ಒಂದು ಪತ್ರಿಕೆಯ ಸುತ್ತ ಕೂಡ ಚಳುವಳಿ ಬೆಳೆಯುತ್ತದೆ. ಮಹಿಳಾ ಚಳುವಳಿಯ ಒಂದು ಅಂತರ್ಗತ ಭಾಗವಾಗಿಯೇ ಮಹಿಳಾ ಪತ್ರಿಕೆ ಬೆಳೆಯಬೇಕೆಂಬ ಇಷ್ಟ ಪತ್ರಿಕೆಗಳಿಗೆ ಹೇಗಿದೆ ಎಂಬುದಕ್ಕೆ ಮಾನುಷಿ ತನ್ನ ಕಣ್ಣು ಮುಂದಿಟ್ಟುಕೊಂಡ ಆಶಯಗಳನ್ನು ಇಲ್ಲಿ ಗಮನಿಸಬಹುದು :

1. ಮಹಿಳೆಯರಿಗೆ ದನಿಯಾಗಬೇಕು, ಮಹಿಳಾದನಿಗೆ ವೇದಿಕೆಯಾಗಬೇಕು.

2. ಬದಲಾವಣೆಯ ರೀತಿಯ ಬಗ್ಗೆ ವ್ಯಾಪಕ ಚರ್ಚೆ ನಡೆಯಲು ಹಾಗೂ ಒಂದು ಒಟ್ಟು ನಿರ್ಧಾರ ಮತ್ತು ಒಟ್ಟು ಹೋರಾಟಕ್ಕೆ ಬರಲು

3. ಮಹಿಳಾ ಸಂಘಟನೆಗಳ, ಮಹಿಳಾ ಚಳುವಳಿಗಾರರ ಸಂಪರ್ಕಕ್ಕೆ

4. ಮಹಿಳೆಯರು ತಮ್ಮ ಒಂಟಿತನವನ್ನು ನಿರಾಶೆಯನ್ನು ಕಳೆದುಕೊಳ್ಳಲು

5. ಚಾರಿತ್ರಿಕ ಮಹಿಳಾ ಅನುಭವದ ವಿಶ್ಲೇಷಣೆ, ಮೌಲ್ಯ ಮಾಪನಕ್ಕೆ

6. ಮಹಿಳಾ ಜೀವನ ಮತ್ತು ತಿರುಚುವಿಕೆಯನ್ನ ತಡೆಯಲು

7. ದೇಶದ ಹಲವೆಡೆಯ ಮಹಿಳಾ ಸ್ಥಿತಿಯ ಬಗ್ಗೆ ಮಾಹಿತಿಗಳನ್ನು ಸಂಗ್ರಹಿಸಿ, ವ್ಯವಸ್ಥೆಗೊಳಿಸುವುದು.

ಮಹಿಳಾ ಚಳುವಳಿಯ ಸೈದ್ಧಾಂತಿಕ ನೆಲೆಯಾದ ಸ್ತ್ರೀವಾದವು ಈಗಿನ ಲಿಂಗವ್ಯವಸ್ಥೆಯ ಸ್ವರೂಪವನ್ನೂ ಅದರ ಮಿತಿಗಳನ್ನೂ ಅಪಾಯಗಳನ್ನೂ ವಿವರಿಸುವಂತೆಯೇ ಆಗಬೇಕಾಗಿರುವ ಬದಲಾವಣೆಗಳೇನು, ಅದಕ್ಕೆ ಬೇಕಾದ ವಿಧಿ, ವಿಧಾನಗಳನ್ನೂ ಚರ್ಚಿಸುತ್ತದೆ. ಈ ಅಂಶಗಳನ್ನು ಜನರಿಗೆ ಮನವರಿಕೆ ಮಾಡಿಕೊಡುವುದು ಚಳುವಳಿಯ ಪ್ರಾಥಮಿಕ ಅಗತ್ಯ. ಇಂಥ ವೈಚಾರಿಕ ಆಂದೋಲನವಿಲ್ಲದಿದ್ದರೆ ಒಂದು ಸುಸಂಗತವಾದ, ಅರ್ಥಪೂರ್ಣವಾದ ಹೋರಾಟವನ್ನು ಕಟ್ಟುವುದು ಸಾಧ್ಯವಿಲ್ಲ. ಈ ವೈಚಾರಿಕ ಆಂದೋಲನದ ಹೊಣೆಗಾರಿಕೆ ಪತ್ರಿಕೋದ್ಯಮವನ್ನೂ ಒಳಗೊಂಡ ನಮ್ಮ ಸಮೂಹ ಮಾಧ್ಯಮಗಳ ಮೇಲಿದೆ. ಈ ಹೊಣೆಯನ್ನು ಪತ್ರಿಕೋದ್ಯಮ ನಿರ್ವಹಿಸುವ ರೀತಿಯ ಮೇಲೂ ಮಹಿಳಾ ಚಳುವಳಿಯ ಬೆಳವಣಿಗೆ ನಿಂತಿದೆ.

★ ★ ★

# ಕೋಮು ಸೌಹಾರ್ದ ಗೀತೆ

ಮಂದಿರ ಮಸೀದಿ ಚರ್ಚುಗಳಲ್ಲಿ
ಹಂಚಿದಿರಿ ಭಗವಂತನನು
ನೆಲವದು ಭಾಗ, ನೀರದು ಭಾಗ
ಒಡೆಯದಿರಿ ನೀವ್ ಜನರನ್ನು
ಒಡೆಯದಿರಿ ನೀವ್ ಜನರನ್ನು

ಸಾಮ್ರಾಜ್ಯವನೆ ತೊರೆದವನು ರಾಮ
ನಡೆದನು ಕಾಡಿಗೆ ಮಹತ್ಯಾಗಿ
ಆತನ ಹೆಸರಲಿ ಹಿಡಿ ನೆಲಕಾಗಿ
ಹರಿಸುವಿರೇಕೆ ನೆತ್ತರ ಕೋಡಿ
ಹರಿಸುವಿರೇಕೆ ನೆತ್ತರ ಕೋಡಿ

ಇಟ್ಟಿಗೆ ಮೇಲೆ ಇಟ್ಟಿಗೆ ಇಟ್ಟು
ಎಣಿಸಿದರಲ್ಲಿ ಹೆಣಗಳನು
ಜನಗಳ ನಡುವೆ, ಮನಗಳ ನಡುವೆ
ದ್ವೇಷದ ಗೋಡೆಯ ಕಟ್ಟಿದರು
ದ್ವೇಷದ ಗೋಡೆಯ ಕಟ್ಟಿದರು

ಕಾಲೇ ಕಂಬ, ದೇಹವೆ ದೇಗುಲ
ಎಂದರು ಅಂದೆಯೆ ಬಸವಣ್ಣ
ಇಟ್ಟಿಗೆ ಗೂಡಿನ ಗುಡಿಯನು ಕಟ್ಟಲು
ಜನಗಳ ಗೋರಿಯ ತೋಡದಿರಿ
ಜನಗಳ ಗೋರಿಯ ತೋಡದಿರಿ

ತಾಯಂದೀರ ಉದರವ ಸೀಳಿ
ಮಕ್ಕಳ ಮೇಲೆ ಬಾಂಬನು ತೂರಿ
ಮಲಗಿದ ಬೋಗಿಗೆ ಬೆಂಕಿಯ ಹಚ್ಚಿ
ಮಸಿ ಬಳಿದಿರಿ ನಿಮ್ಮ ಧರ್ಮಕ್ಕೆ
ಮಸಿ ಬಳಿದಿರಿ ನಿಮ್ಮ ಧರ್ಮಕ್ಕೆ

ಅಯೋಧ್ಯೆಯಲ್ಲಿ ರಾಮನೆ ಇಲ್ಲ
ಗುಜರಾತಲ್ಲಿ ಗಾಂಧಿಯು ಇಲ್ಲ
ನೆತ್ತರು ಹತ್ತಿದೆ ಈ ನೆಲಕೆಲ್ಲ
ತೊಳೆಯಿರಿ ಮನಸಿನ ಕೊಳಕೆಲ್ಲ
ತೊಳೆಯಿರಿ ಮನಸಿನ ಕೊಳಕೆಲ್ಲ

ರಾಮನು ಇಹನು, ರಹೀಮನಿಹನು
ನಮ್ಮೆದೆ ನಿಮ್ಮೆದೆ ಗೂಡಿನಲಿ
ಕ್ರಿಸ್ತನು ಇಹನು, ಗುರುಗೋವಿಂದನು
ಶುಭ್ರ ಹೃದಯದ ಆಳದಲಿ
ಶುಭ್ರ ಹೃದಯದ ಆಳದಲಿ

ಕಾಶ್ಮೀರದಲಿ ಸಾಯುವ ಹಿಂದು
ಗುಜರಾತಲ್ಲಿ ಮುಸಲ್ಮಾನ
ಸತ್ತರು ಇಸಾಯಿ ಒರಿಯಾದಲ್ಲಿ
ಸಿಕ್ಕರು ಮಡಿದರು ದಿಲ್ಲಿಯಲಿ
ಸಿಕ್ಕರು ಮಡಿದರು ದಿಲ್ಲಿಯಲಿ

ದೇವರ ಹೆಸರಲಿ, ಧರ್ಮದ ಹೆಸರಲಿ
ಜಾತಿವಾದವ ಬಿತ್ತುವರು
ಹೆಣಗಳ ಬಣವೆಯ ಮೇಲ್ಗಡೆ ಕುಳಿತು
ಮತಗಳ ಎಣಿಸುವ ಹದ್ದುಗಳು
ಮತಗಳ ಎಣಿಸುವ ಹದ್ದುಗಳು

ಧರ್ಮದ ಹೆಸರಲಿ ಕಲಹವ ಹೊತ್ತಿಸಿ
ಕಾಳಗ ಕೆರಳಿಸಿ ನೋಡುವರು
ಕುರ್ಚಿಯ ಭದ್ರತೆ ಕಾಯುವ ಈ ಜನ
ರಾಟಕೆ ನಾವ್ ಬರಿ ದಾಳಗಳು
ಆಟಕೆ ನಾವ್ ಬರಿ ದಾಳಗಳು

ಪ್ರಜಾತಂತ್ರದಲಿ ಪ್ರಜೆಗಳ ಲೂಟಿ
ಜಾತಿ ಧರ್ಮಧ ನೆಪದಲ್ಲಿ
ಈಶ್ವರ ಅಲ್ಲಾ ಆಯುಧವಿಲ್ಲಿ
ಕತ್ತಿ ತ್ರಿಶೂಲದ ಜೊತೆಯಲ್ಲಿ
ಕತ್ತಿ ತ್ರಿಶೂಲದ ಜೊತೆಯಲ್ಲಿ

ಕತ್ತಿ ತ್ರಿಶೂಲವ ಕೆಳಗಿಟ್ಟು ಬನ್ನಿ
ಶಾಂತಿ ಮಂತ್ರವ ನೀವು ಜಪಿಸಿ
ಧರ್ಮದ ಹೆಸರಲಿ ಯುದ್ಧವ ನಿಲ್ಲಿಸಿ
ಆತಂಕವಾದವ ನೀವ್ ಅಳಿಸಿ
ಆತಂಕವಾದವ ನೀವ್ ಅಳಿಸಿ

ಬಡತನ, ಹಸಿವು, ಭ್ರಷ್ಟಾಚಾರ
ದಿಟದಲಿ ಇವು ನಮ್ಮ ಶತ್ರುಗಳು
ಯುದ್ಧದ ದಾಹ, ಸಾವಿನ ಮೋಹ
ನಿಜದಲಿ ಇವು ನಮ್ಮ ವೈರಿಗಳು
ನಿಜದಲಿ ಇವು ನಮ್ಮ ವೈರಿಗಳು

ಸರ್ವಧರ್ಮದ ಸಮನ್ವಯವೊಂದೇ
ನಮ್ಮ ನಾಡನು ಇಂದು ಉಳಿಸುವುದು
ಗಾಂಧಿ ಬುದ್ಧ ಜಿನ ಕ್ರಿಸ್ತರ ಆದರ್ಶ
ಪ್ರೀತಿ ಕರುಣೆಯ ಬಿತ್ತುವುದು
ಪ್ರೀತಿ ಕರುಣೆಯ ಬಿತ್ತುವುದು

ನಡುವೆ ಎಳೆದಿಹ ಗೆರೆಗಳ ಅಳಿಸಿ
ಕದನವಿರಾಮಕೆ ಕರೆ ನೀಡಿ
ಸಾವಿನ ತಾಂಡವ ನೃತ್ಯವ ನಿಲ್ಲಿಸಿ
ಒಂದಾಗುವ ನಾವ್ ಒಗ್ಗೂಡಿ
ಎಂದೆಂದಿಗೂ ನಾವ್ ಜೊತೆಗೂಡಿ

ಜನಸಮುದಾಯದ ಹೋರಾಟದಲ್ಲಿ
ಜಾತಿವಾದವ ತೊಡೆಯಲು
ಧರ್ಮಬೇಧವ ಅಳಿಸಲು
ಹಿಂಸೆ ದೌರ್ಜನ್ಯವ ನಿಲಿಸಲು
ಹೊಸ ಭಾರತವನೆ ನಾವ್ ನಿರ್ಮಿಸಲು
ನಡೆಯಲಿ ನಮ್ಮಯ ಹೋರಾಟವು
ನಡೆಯಲಿ ನಮ್ಮಯ ಹೋರಾಟವು

**- ನೇಮಿಚಂದ್ರ**

*(ಶ್ರೀ ವಿನಯ್ ಮಹಾಜನ್ ಅವರ 'ಮಂದಿರ ಮಸ್ಜಿದ್' ಗೀತೆಯಿಂದ ಸ್ಫೂರ್ತಿ ಪಡೆದು ರಚಿಸಿದ ಹಾಡು)*

## ಉದ್ದೇಶ

ನನಗಿಂತ ಮೊದಲು ನನ್ನ ಹೆಂಡತಿಯನ್ನ
ಸುಟ್ಟು ಹಾಕಿದ್ದರು ಅವರು
ಅವಳಾಗ ನನ್ನನ್ನು ಉಳಿಸಿಬೇಕೆಂದು
ನನಗೆ ಮುಂದಾಗಿ ನಿಂತಿದ್ದಳು.

ನನ್ನ ಮಕ್ಕಳನ್ನ ಕೊಂದು ಹಾಕಿದ್ದು
ನನಗೆ ತಿಳಿಯಲೇ ಇಲ್ಲ
ಹಸುಗೂಸುಗಳಾಗಿದ್ದ ಅವರ ಚೀರಾಟ
ನನಗೆ ಕೇಳಿಸಲಿಲ್ಲ
ನನ್ನ ಕೈ ಚಳಕ ಹೇಗೆ ಮಾಯವಾಯಿತೆಂದು ಕೂಡ
ನನಗೆ ಗೊತ್ತಿಲ್ಲ.

ನನ್ನೀ ಕೈಗಳಿಗೇನಾಯಿತೋ ನಾ ಅರಿಯೆ
ಈಗ ಅವು ಸುಟ್ಟು ಪಂಜರಗಳಾಗಿದೆ ಮಾತ್ರ
ಸುಟ್ಟ ದೇಹಕ್ಕೆ ಅಂಟಿ ಹೋಗಿದೆ ಅವು
ಅದರಲ್ಲಿತ್ತು ಚೈತನ್ಯ - ಚಟುವಟಿಕೆ ಅದು ಅದರ
ನಿಪುಣತೆಯಾಗಿತ್ತು
ಹಾಗೂ ನನ್ನನ್ನ ಹೇಗೆ ಕೊಂದು ಹಾಕಿದರೆಂದರೆ
ಎಷ್ಟೋ ಜನಗಳ ಸಾಮೂಹಿಕ ಹತ್ಯೆಯ ನಡುವೆ
ಬಂದಿದ್ದರ ಹಾಗೆ
ನನ್ನ ಬದುಕಿನ ಉದ್ದೇಶ ಕೂಡ ಏನೂ
ಮಹತ್ವದ್ದಾಗಿರಲಿಲ್ಲ
ಹಾಗೂ ನನ್ನನ್ನ ಕೊಂದು ಹಾಕಿದರು, ನನ್ನನ್ನ
ಕೊಲ್ಲುವುದರಲ್ಲಿ
ಏನೋ ದೊಡ್ಡ ಉದ್ದೇಶ ಅಡಗಿರುವಂತೆ.

ಹಿಂದಿ ಮೂಲ : ಡಾ॥ ಮಂಗಲೇಶ ಡಬರಾಲ
ಅನು : **ಪ್ರೊ. ಬಿ. ವೈ. ಲಲಿತಾಂಬ**

## ಕರ್ನಾಟಕ ಸರ್ಕಾರ

### ಬರಲಿರುವ ಭರವಸೆಯ ದಿನಗಳಲ್ಲಿ

**ಕೃಷಿ**

→ ಕೃಷಿ ಮತ್ತು ಸಂಬಂಧಿತ ವಲಯಗಳಿಗೆ ಸರ್ಕಾರದ ಪ್ರಥಮ ಆದ್ಯತೆ.

→ ಸರ್ಕಾರ ಕೃಷಿ ಅಭಿವೃದ್ಧಿಗಾಗಿ ರೂ. 5100 ಕೋಟಿ ಮೀಸಲಿರಿಸಿದೆ. ಇದು ರಾಜ್ಯ ವಾರ್ಷಿಕ ಆಯವ್ಯಯದ ಶೇ. 25ರಷ್ಟು.

→ ಬೆಳೆ ವಿಮೆ ಚಂದಾದಾರ ರೈತರಿಗೆ ಸುಮಾರು ರೂ. 120 ಕೋಟಿ ಪರಿಹಾರ ಧನ ಮಂಜೂರು.

→ ಹನಿ ನೀರಾವರಿ ಮತ್ತು ಸ್ಪ್ರಿಂಕ್ಲರ್‌ಗಳ ಮಾರಾಟ ತೆರಿಗೆ ರದ್ದುಗೊಳಿಸಲು ಉದ್ದೇಶ.

→ ಮಾರುಕಟ್ಟೆ ಮಧ್ಯಪ್ರವೇಶ ಯೋಜನೆಯಡಿ ರೂ. 125ಕೋಟಿ ಆವರ್ತ ನಿಧಿ ಬಿಡುಗಡೆ, ಮೆಕ್ಕೆ ಜೋಳ, ರಾಗಿ ಭತ್ತ ಬುತ್ತು ಕೊಬ್ಬರಿ ಬೆಳೆಗಳಿಗೆ ಬೆಂಬಲ ಬೆಲೆ ಒದಗಿಸಿದಂತೆ ಅಡಿಕೆಗೂ ಈ ಸೌಲಭ್ಯ ವಿಸ್ತರಿಸಲು ಯೋಜನೆ.

→ ರೂ. 100 ಕೋಟಿ ವಿಶ್ವಬ್ಯಾಂಕ್ ನೆರವಿನಿಂದ ಜಲಾನಯನ ಅಭಿವೃದ್ಧಿ ಯೋಜನೆ ಮತ್ತು ನಬಾರ್ಡ್ ನೆರವಿನಿಂದ 50,000 ಹೆಕ್ಟೇರ್ ಒಣ ಭೂಮಿಯ ಅಭಿವೃದ್ಧಿಗೆ ಕ್ರಮ.

→ ಗ್ರಾಮ ತೋಟಗಾರಿಕೆಗೆ ಸಮಗ್ರ ತರಬೇತಿ ಕಾರ್ಯಕ್ರಮ. ಇದರಲ್ಲಿ ಅಂಗನವಾಡಿ, ಸ್ವಸಹಾಯ ಗುಂಪುಗಳು, ರೈತರ ಸಂಘಟನೆಗಳನ್ನು ತೊಡಗಿಸಿಕೊಳ್ಳಲಾಗುವುದು.

→ ನೀರಾವರಿಗೆ ರೂ. 2790 ಕೋಟಿ ಮೀಸಲು. ಇದು ಒಟ್ಟಾರೆ ಬಜೆಟಿನ ಶೇ. 32ರಷ್ಟು ಆಗಿದೆ.

→ ಕೃಷ್ಣಭಾಗ್ಯ ಜಲನಿಗಮ ಮತ್ತು ಕರ್ನಾಟಕ ನೀರಾವರಿ ನಿಗಮಗಳ ಮೂಲಕ 3.85 ಲಕ್ಷ ಎಕರೆ ಭೂಪ್ರದೇಶಕ್ಕೆ ನೀರಾವರಿ ಸೌಕರ್ಯ ಕಲ್ಪಿಸಲು ಕ್ರಮ.

→ ನೀರಾವರಿ ನಿರ್ವಹಣೆಗಾಗಿ ಬಳಕೆದಾರರ ಸಹಕಾರಿ ಸಂಘಗಳಿಗೆ ತೀವ್ರ ಚಾಲನೆ.

**ಗ್ರಾಮೀಣಾಭಿವೃದ್ಧಿ**

→ ಪಂಚಾಯತ್ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿರುವ ವಿವಿಧ ಸಂಸ್ಥೆಗಳ ನಡುವೆ ಸಮನ್ವಯ ಸಾಧಿಸಲು ಗ್ರಾಮೀಣ ಅಭಿವೃದ್ಧಿ ಸಲಹಾ ಮಂಡಳಿ ಸ್ಥಾಪನೆಗೆ ಉದ್ದೇಶ.

→ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯಡಿ ರೂ. 289 ಕೋಟಿ ವೆಚ್ಚಕ್ಕೆ ಉದ್ದೇಶ.

→ ರಾಜ್ಯದ 11 ಜಿಲ್ಲೆಗಳಲ್ಲಿ ಗ್ರಾಮೀಣ ನೀರು ಪೂರೈಕೆ ಮತ್ತು ನೈರ್ಮಲ್ಯಕ್ಕಾಗಿ ಜಲ ನಿರ್ಮಲ ಯೋಜನೆ ರೂ. 1,035 ಕೋಟಿ ವೆಚ್ಚದಲ್ಲಿ ಯೋಜನೆಯ ಅನುಷ್ಠಾನ.

→ ದೊಡ್ಡ ಬಳ್ಳಾಪುರದಲ್ಲಿ ಸ್ಥಾಪಿಸಲು ಉದ್ದೇಶಿಸಿದ್ದ ಸಿದ್ಧ ಉಡುಪು ಪಾರ್ಕ್‌ನ ಕಾರ್ಯಪ್ರಗತಿಯಲ್ಲಿ ಈ ಪಾರ್ಕ್‌ಗೆ ಅಗತ್ಯವಾದ 150 ಎಕರೆ ಪ್ರದೇಶವನ್ನು ಸ್ವಾಧೀನಪಡಿಸಿಕೊಳ್ಳಲಾಗುವುದು. ಇದು 20,000ಕ್ಕೂ ಹೆಚ್ಚು ಗ್ರಾಮೀಣರಿಗೆ ಉದ್ಯೋಗ ಒದಗಿಸಲಿದೆ.

→ ಎಲ್ಲಾ ಲಂಬಾಣಿ ತಾಂಡಾಗಳನ್ನು ಕಂದಾಯ ಗ್ರಾಮಗಳನ್ನಾಗಿ ಪರಿವರ್ತಿಸಲು ಒಪ್ಪಿಗೆ. ಇದಕ್ಕಾಗಿ ಪ್ರಸ್ತುತ ಜಾರಿಯಲ್ಲಿರುವ ಮಾರ್ಗದರ್ಶಿ ಸೂತ್ರ ಏರ್ಪಾಡು.

**ವಸತಿ**

→ ಪರಿಶಿಷ್ಟ ಜಾತಿಃ ಪರಿಶಿಷ್ಟ ಪಂಗಡದ ಫಲಾನುಭವಿಗಳಿಗೆ ಪ್ರತಿ ವರ್ಷ ಗ್ರಾಮೀಣ ಆಶ್ರಯ ಯೋಜನೆಯಡಿ ಶೇ. 50ರಷ್ಟು ಮನೆಗಳ ನಿರ್ಮಾಣ (ಪ್ರತಿ ವರ್ಷ 1 ಲಕ್ಷ ಮನೆಗಳು)

→ ಮುಖ್ಯ ಮಂತ್ರಿಗಳ ಮಾದರಿ ಪಟ್ಟಣ ವಸತಿ ಕಾರ್ಯಕ್ರಮ ಎಂಬ ವಿನೂತನ ಯೋಜನೆಯಡಿ ಸಣ್ಣ ಪಟ್ಟಣಗಳಲ್ಲಿ ವಸತಿ ಬಡಾವಣೆಗಳ ಅಭಿವೃದ್ಧಿಗೆ ತ್ವರಿತ ಕ್ರಮ.

- ಕರ್ನಾಟಕ ವಾರ್ತೆ

# ಹೆಣ್ಣು - ಎರಡು ದೃಷ್ಟಿ

ಎಲ್ಲ ಚಲನಶೀಲ ಸಮಾಜಗಳಲ್ಲೂ ಹೆಣ್ಣಿನ ಸ್ಥಾನವು ವಿವಿಧ ಕಾಲಘಟ್ಟಗಳಲ್ಲಿ ಭಿನ್ನವಾಗಿ ತೋರಿಬಂದಿದೆ. ಒಂದೇ ಕಾಲಘಟ್ಟದಲ್ಲಿ ಸಹ ಬೇರೆ ಬೇರೆ ದೃಷ್ಟಿಕೋನಗಳಿರುವುದು ಚರಿತ್ರೆಯ ಪುಟಗಳಲ್ಲಿ ದಾಖಲಾಗಿದೆ. ಬೌದ್ಧಸಂಘಕ್ಕೆ ಮಹಿಳೆಯರನ್ನು ಸೇರಿಸಿಕೊಳ್ಳಬೇಕೆಂಬ ಸಲಹೆಯನ್ನು ಆನಂದ ಮುಂದಿಟ್ಟಾಗ ಹಾಗೆ ಮಾಡಿದರೆ ಬೌದ್ಧಸಂಘದ ಅವನತಿಗೆ ಆಹ್ವಾನ ನೀಡಿದಂತಾಗುತ್ತದೆಯೆಂದು ಬುದ್ಧ ಹೇಳಿದನೆಂಬ ಪ್ರತೀತಿ ಇದೆ. ಅಶ್ವಘೋಷ ಕ್ರಿ.ಶ. ಒಂದನೇ ಶತಮಾನದಲ್ಲಿದ್ದವನು. ಥೇರೀಗಳು ಬೌದ್ಧ ಸಂಘಕ್ಕೆ ನೀಡಿದ್ದ ಕಾಣಿಕೆ ಅವನ ಮುಂದಿದ್ದರೂ ಮಹಿಳೆಯರ ಬಗೆಗಿನ ಅವನ ದೃಷ್ಟಿ ಅದರಿಂದ ಪ್ರಭಾವ ಪಡೆಯಲಿಲ್ಲ. ಅವನ "ಸೌಂದರನಂದ" ಮಹಾಕಾವ್ಯದಲ್ಲಿ ಇದು ಸ್ಪಷ್ಟವಾಗಿದೆ. ಬೌದ್ಧ ಸಂಪ್ರದಾಯದಲ್ಲಿ ಕ್ರಮೇಣ ವಜ್ರಯಾನ ಪಂಥವು ಉಗಮವಾಗಿ ತಾಂತ್ರಿಕ ಆಚರಣೆಗಳು ಪ್ರಾಶಸ್ತ್ಯ ಪಡೆದವು. ಇದು ಆರು-ಏಳನೆ ಶತಮಾನಗಳಲ್ಲಿನ ವಿದ್ಯಮಾನ. ಆ ಪರಂಪರೆಯಲ್ಲಿ ಹೆಣ್ಣನ್ನು ಶಕ್ತಿ ದೇವಿ ಮುಂತಾಗಿ ಕಾಣುವ ಪದ್ಧತಿ ಇದೆ. ಸಮಾಜದಲ್ಲಿ ಸಾಮಾನ್ಯವಾಗಿ ಹೆಣ್ಣಿಗೆ ದಕ್ಕುತ್ತಿದ್ದ ಸ್ಥಾನ-ಮಾನಗಳಿಗೆ ಭಿನ್ನವಾಗಿ "ಶಕ್ತಿ ಸಂಗಮ ತಂತ್ರ"ದಂತಹ ಗ್ರಂಥಗಳಲ್ಲಿ ಹೆಣ್ಣಿನ ವೈಭವೀಕರಣವನ್ನು ಕಾಣಬಹುದು. ಈ ಎರಡು ಗ್ರಂಥಗಳಲ್ಲಿ ಪ್ರತಿಫಲಿತವಾಗಿರುವ ದೃಷ್ಟಿಗಳು ಸಾಮಾಜಿಕವಾಗಿ ಎಷ್ಟರಮಟ್ಟಿಗೆ ವಾಸ್ತವ ಸತ್ಯಗಳಾಗಿದ್ದುವೆಂಬುದು ವಿಚಾರ ಮಾಡಬೇಕಾದ ಸಂಗತಿ.

- ಸಂ.

## ಸೃಷ್ಟಿಕರ್ತೆ

ಹೆಣ್ಣೆ ಈ ವಿಶ್ವದ ಸೃಷ್ಟಿಕರ್ತೆ
ಈ ವಿಶ್ವವೇ ಅವಳ ರೂಪ
ಹೆಣ್ಣೇ ಈ ವಿಶ್ವದ ಆಧಾರ
ಇವಳು ಸತ್ಯದ ದೇಹರೂಪ

ಯಾವ ರೂಪವನ್ನೇ ಧರಿಸಲಿ
ಹೆಣ್ಣಾಗಲಿ ಗಂಡಾಗಲಿ
ಅವಳೇ ಪರಮಶಕ್ತಿ
ಎಲ್ಲ ಚರಾಚರ ರೂಪಗಳೂ ಅವಳಲ್ಲೇ ಅಡಗಿವೆ.

ಹೆಣ್ಣಿನಷ್ಟು ಉತ್ತಮ ಆಕೃತಿ ಇನ್ನೊಂದಿಲ್ಲ
ಹೆಣ್ಣಿಗಿಂತ ಉತ್ತಮ ಸ್ಥಿತಿ ಇನ್ನೊಂದಿಲ್ಲ

ಹೆಣ್ಣಿಗಿಂತ ಮಿಗಿಲಾದ ದೈವವೊಂದು
ಹಿಂದೆ ಎಲ್ಲೂ ಇರಲಿಲ್ಲ, ಈಗಲೂ ಇಲ್ಲ, ಮುಂದೆಯೂ
ಇರಲಾರದು.

ಹೆಣ್ಣಿಗೆ ಹೋಲಿಸಬಹುದಾದ
ಯಾವ ರಾಜ್ಯವಾಗಲೀ ಸಂಪತ್ತಾಗಲೀ ಇಲ್ಲ.

ಹೆಣ್ಣಿಗಿಂತ ಪವಿತ್ರವಾದ ಸ್ಥಳವೊಂದು
ಹಿಂದೆ ಎಲ್ಲೂ ಇರಲಿಲ್ಲ, ಈಗಲೂ ಇಲ್ಲ, ಮುಂದೆಯೂ
ಇರಲಾರದು.

ಹೆಣ್ಣಿಗೆ ಸಮನಾದ
ಪ್ರಾರ್ಥನೆಯೂ ಕೂಡ ಎಲ್ಲಿಯೂ ಇಲ್ಲ.

ಹೆಣ್ಣಿಗೆ ಸಮವಾದ ಯೋಗವು
ಹಿಂದೆ ಎಂದೂ ಇರಲಿಲ್ಲ, ಈಗಲೂ ಇಲ್ಲ, ಮುಂದೆಯೂ
ಇರಲಾರದು.

ಹೆಣ್ಣಿಗೆ ಸರಿದೂಗುವ
ನಿಗೂಢ ಸೂತ್ರವಾಗಲೀ, ತಪಸ್ಸಾಗಲೀ ಯಾವುದೂ ಇಲ್ಲ.

ಹೆಣ್ಣಿಗಿಂತ ಶ್ರೇಷ್ಠವಾದ ಐಸಿರಿಗಳಾವುವೂ
ಹಿಂದೆ ಎಂದೂ ಇರಲಿಲ್ಲ, ಈಗಲೂ ಇಲ್ಲ, ಮುಂದೆಯೂ
ಇರಲಾರವು.

ಮೂಲ - ಶಕ್ತಿಸಂಗಮತಂತ್ರ
ಅನುವಾದ - ರಾಮಲಿಂಗಪ್ಪ ಟಿ. ಬೇಗೂರು
ಅಜಿತ್ ಮುಖರ್ಜಿಯವರ Kali the Feminine Force
ಎಂಬ ಪುಸ್ತಕದಲ್ಲಿ ಉದ್ಧೃತ.

## ಸ್ತ್ರೀ ವಿಘ್ನ ಶ್ರಮಣನ ಉಪದೇಶ

ವಿಷದ ಬಳ್ಳಿಯನ್ನು ಸೋಂಕಿದಂತೆ
ಸರ್ಪವಿರುವ ಮನೆಯನ್ನು ಹೊಕ್ಕಂತೆ
ಒರೆಗಳಚಿದ ಖಡ್ಗವನ್ನು
ಅಲಗಿನ ಕಡೆಯಿಂದ ಹಿಡಿದಂತೆ
ಹೆಂಗಸರ ಸಹವಾಸ ದುಃಖಾಂತ ನಿಶ್ಚಯ.

ಸಜ್ಜನರು ಸ್ವಜನರಿಂದ ದೂರವಾಗುವುದು
ಗೆಳೆಯರು ಗೆಳೆಯರಿಂದ ದೂರವಾಗುವುದು
ಎಂಬಂಥದೆಲ್ಲವೂ ನಡೆಯುವುದು
ಪರರನ್ನು ದೂಷಿಸುವುದರಲ್ಲಿ ನಿಪುಣರಾದ
ಮೂರ್ಖರೂ ಅನಾರ್ಯರೂ ಆದ ಸ್ತ್ರೀಯರಿಂದಲೇ

ವೈಯಾರವಾಗಿ ಮಾತನಾಡಿ
ಮನವನ್ನು ಅಪಹರಿಸುತ್ತಾರೆ
ಹರಿತವಾದ ಮಾತುಗಳಿಂದ
ಪ್ರಹಾರ ಮಾಡುತ್ತಾರೆ
ಹೆಂಗಸರ ನಾಲಿಗೆಯ ಮೇಲೆ ಜೇನಿರುತ್ತದೆ
ಅವರ ಹೃದಯದಲ್ಲಿ ಹಾಲಾಹಲವಿರುತ್ತದೆ.

ದೇಹ ದೃಡವಿದ್ದರೇನು
ಸಂಪತ್ತು ಅಪಾರವಿದ್ದರೇನು
ಬುದ್ಧಿ-ಕುಲ-ಪರಾಕ್ರಮ ಏನಿದ್ದರೂ
ಹೆಂಗಸರು ಲೆಕ್ಕಿಸುವುದಿಲ್ಲ
ಮೊಸಳೆ ತುಂಬಿದ ನದೀ ಪ್ರವಾಹದಂತೆ
ಎಲ್ಲರ ಮೇಲೂ ಹರಿಹಾಯುತ್ತಾರವರು.

ಸ್ತ್ರೀ ಒಳ್ಳೆಯ ಮಾತುಗಳನ್ನಾಗಲೀ
ಲಾಲನೆ-ಪಾಲನೆ ಸ್ನೇಹವನ್ನಾಗಲೀ
ಸ್ಮರಿಸಿಕೊಳ್ಳುವುದಿಲ್ಲ.
ಹುಡುಕಿ-ಮಾಡಿಕೊಂಡ ಹೆಂಡತಿಯೂ ಚಂಚಲ
ಅದಕ್ಕೆ ಹಗೆಗಳಂತೆ ಅವರನ್ನೂ ನಂಬುವಂತಿಲ್ಲ

ಕೈಯ ಕಕ್ಕಡ ಗಾಳಿ ಬೀಸಿ ಜ್ವಾಲೆಯೆದ್ದು
ಆ ಕಯ್ಯನ್ನೇ ಸುಡುವಂತೆ
ಕಾಲಿಗೆ ಸುತ್ತಿದ ಸರ್ಪ ಕೋಪಗೊಂಡು
ಆ ಕಾಲನ್ನೇ ಕಚ್ಚುವಂತೆ
ಮನೆಗೆ ತಂದು ಸಾಕಿದ ಹುಲಿಮರಿ ದೊಡ್ಡದಾಗಿ
ಆ ಮನೆ ಮಂದಿಯನ್ನೇ ಕೊಲ್ಲುವಂತೆ
ಸ್ತ್ರೀ ಸಹವಾಸವೂ ನಾನಾ ರೀತಿ ಅನರ್ಥಕಾರಿಯಾಗಲೂ
ಬಲ್ಲುದು.

ಮೂಲ : ಅಶ್ವಘೋಷನ 'ಸೌಂದರನಂದ' (ಬೌದ್ಧಕಾವ್ಯ)
ಅನು. **ಡಾ|| ಎಲ್. ಬಸವರಾಜು**
(ಪುಟ 83, 84, 85, 89)

# ಗ್ರಾಮೀಣಾಭಿವೃದ್ಧಿಯಲ್ಲಿ ಕರ್ನಾಟಕದ ಮುನ್ನಡೆ

## ರಾಷ್ಟ್ರದ ಘನತೆ, ಗೌರವ, ಕೀರ್ತಿ ಕಾಪಾಡಲು ದೃಢ ಸಂಕಲ್ಪ ಮಾಡೋಣ

**ಗ್ರಾಮೀಣಾಭಿವೃದ್ಧಿ :**

→ ವಿಶೇಷವಾಗಿ ಉತ್ತರ ಭಾಗದ ಜಿಲ್ಲೆಗಳಲ್ಲಿ ಹೆಚ್ಚು ಪ್ರಯೋಗಾಲಯಗಳನ್ನು ಸ್ಥಾಪಿಸಿ ರೋಗ ಪತ್ತೆ ಹಚ್ಚುವ ಸೌಕರ್ಯ ವೃದ್ಧಿಗೆ ಯೋಜನೆ.

→ ಪ್ರಮುಖ ಮಾರುಕಟ್ಟೆಗಳಲ್ಲಿ ಆನ್‌ಲೈನ್ ಬೆಲೆ ಮಾಹಿತಿ ವ್ಯವಸ್ಥೆಯ ಅನುಷ್ಠಾನ.

→ ಗ್ರಾಮೀಣ ಪ್ರದೇಶಗಳಲ್ಲಿ ಜಾನುವಾರುಗಳಿಗೆ ಕೃತಕ ಗರ್ಭಧಾರಣೆಯನ್ನು ಹಂತಹಂತವಾಗಿ ಖಾಸಗೀಕರಣಗೊಳಿಸಲು ಕ್ರಮ.

→ ಮಾರುಕಟ್ಟೆ ಸಮಿತಿಗಳಿಗೆ ಇಂಟರ್‌ನೆಟ್ ಸೌಲಭ್ಯಗಳ ಪೂರೈಕೆ

→ ಬಡತನ ರೇಖೆಗಿಂತ ಕಡಿಮೆ ಇರುವ ಕುಟುಂಬಗಳಿಗೆ ಸಾರ್ವಜನಿಕ ವಿತರಣಾ ವ್ಯವಸ್ಥೆಯ ಸೌಲಭ್ಯದ ಖಾತರಿಗಾಗಿ ಮನೆ ಮನೆ ಸಮೀಕ್ಷಾ ಕಾರ್ಯ.

→ ಪಡಿತರ ಚೀಟಿಗಳ ಗಣಕೀಕರಣ

→ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದ ಮೂಲಕ ಗ್ರಾಮೀಣ ಮತ್ತು ನಗರ ಪ್ರದೇಶದ ವಸತಿಹೀನ ಬಡವರಿಗೆ ಹನ್ನೊಂದು ಲಕ್ಷ ಮನೆಗಳ ನಿರ್ಮಾಣಕ್ಕೆ ಬೃಹತ್ ಯೋಜನೆ.

→ ಕೊಳಚೆ ಪ್ರದೇಶದ ಅಭಿವೃದ್ಧಿಗಾಗಿ ನಿರ್ಮಲ ಜ್ಯೋತಿ ಕಾರ್ಯಕ್ರಮದ ಅನುಷ್ಠಾನ.

**ಕೃಷಿ :**

→ ಪ್ರಕೃತಿ ವಿಕೋಪದ ಪರಿಹಾರಕ್ಕೆ ರೂ. 103 ಕೋಟಿಗಳ ಬಿಡುಗಡೆ

→ ಬರಗಾಲ ಪೀಡಿತ ಪ್ರದೇಶಗಳಿಗೆ ಆಹಾರ ಧಾನ್ಯಗಳ ಹಂಚಿಕೆ.

→ ಕೃಷಿ ಆಯೋಗದ ಶಿಫಾರಸ್ಸುಗಳ ಜಾರಿ 745 ಹೋಬಳಿಗಳ ಪೈಕಿ 741 ಹೋಬಳಿಗಳಲ್ಲಿ ರೈತ ಸಂಪರ್ಕ ಕೇಂದ್ರಗಳ ಸ್ಥಾಪನೆ.

→ ಕೃಷಿ ಪದ್ಧತಿ ಪ್ಯಾಕೇಜ್ ವಿವರಗಳು ಪರಿಕರ ದಾಸ್ತಾನು ಸ್ಥಿತಿ ಮತ್ತು ತಾಂತ್ರಿಕ ವಿವರಗಳನ್ನು ಒದಗಿಸುವ ವೆಬ್‌ಸೈಟ್ ಸ್ಥಾಪನೆ.

→ ತೋಟಗಾರಿಕೆ ಅಭಿವೃದ್ಧಿಗೆ ವಿಶೇಷ ಒತ್ತು.

→ ಮಾಹಿತಿ ಬ್ಯಾಂಕ್ ಮೂಲಕ ಮಾಹಿತಿ ಒದಗಿಸಲು ಏಕ ಗವಾಕ್ಷಿ ವಿಧಾನ ಅನುಸರಣೆ.

**ಸಾರಿಗೆ :**

→ 7,000 ಕಿ.ಮೀ ಉದ್ದದ ರಾಜ್ಯ ಹೆದ್ದಾರಿಗಳ ನಿರ್ವಹಣಾ ಕಾರ್ಯಕ್ರಮ.

→ ನಬಾರ್ಡ್ ನೆರವಿನಿಂದ ರೂ. 320ಕೋಟಿ ವೆಚ್ಚದಲ್ಲಿ 4706 ಕಿ.ಮೀ. ಗ್ರಾಮೀಣ ರಸ್ತೆಗಳ ಸುಧಾರಣೆ 100 ಸೇತುವೆಗಳ ನಿರ್ಮಾಣ.

– ಕರ್ನಾಟಕ ವಾರ್ತೆ

# ಮಹಿಳಾ ಆಯೋಗ ಮತ್ತು ಗುಜರಾತ್

ಗುಜರಾತಿನ ಗೋಧ್ರಾದಲ್ಲಿ ಫೆಬ್ರವರಿ 27ರಂದು ನಡೆದ ಸಬರಮತಿ ಹತ್ಯಾಕಾಂಡ ಮತ್ತು ಅದರ ಪ್ರತಿಧ್ವನಿಯಾಗಿ ಗುಜರಾತಿನ ಹಲವಾರು ಭಾಗಗಳಲ್ಲಿನ ಅಲ್ಪ ಸಂಖ್ಯಾತರ ಮೇಲೆ ಹಲ್ಲೆ, ಪೈಶಾಚಿಕ ನರ್ತನ ಎದೆ ನಡುಗಿಸುವಂತಹುದು. ಈ ಅಸಹ್ಯವಾದ, ಬರ್ಬರ ಹತ್ಯಾಕಾಂಡದಲ್ಲಿ ವಿಶೇಷವಾಗಿ ನರಳಿದವರು, ಬಲಿಯಾದವರು ಮಹಿಳೆಯರು ಮತ್ತು ಮಕ್ಕಳು. ಪೋಲೀಸರ ರಕ್ಷಣೆಯಿಲ್ಲದೆ, ಈ ಹೆಂಗಳೆಯರ ನೋವಿನ ಧ್ವನಿಯನ್ನು ಕೇಳಲು ಗುಜರಾತಿನಲ್ಲಿ ಸರ್ಕಾರದ ಯಾವ ಸಂಸ್ಥೆಯೂ ಮುಂದೆ ಬರಲಿಲ್ಲ. ಗುಜರಾತಿನಲ್ಲಿ ರಾಜ್ಯ ಮಹಿಳಾ ಆಯೋಗವೇ ಅಸ್ತಿತ್ವದಲ್ಲಿಲ್ಲ. ಹಾಗಿರುವಾಗ ಕೇಂದ್ರದ ಮಹಿಳಾ ಆಯೋಗಕ್ಕೆ ಮಹಿಳಾ ಧ್ವನಿ ಕೇಳಿಸುವುದಾದರೂ ಹೇಗೆ?

ಗುಜರಾತಿನಲ್ಲಿ ಗಲಭೆ ನಡೆದ 57 ದಿನಗಳ ನಂತರ ಮಹಿಳಾ ರಾಷ್ಟ್ರೀಯ ಆಯೋಗವು ಸಂತ್ರಸ್ಥರನ್ನು ಭೇಟಿಮಾಡುವ ದೊಡ್ಡ ಮನಸ್ಸು ಮಾಡಿತು, ಏಪ್ರಿಲ್ 11 ಮತ್ತು 12ರಂದು ಮಹಿಳಾ ಆಯೋಗ ಗುಜರಾತಿಗೆ ಭೇಟಿ ನೀಡಿ ತನ್ನ ವರದಿಯನ್ನು ಸಿದ್ಧಗೊಳಿಸಿ ಪತ್ರಿಕಾ ಗೋಷ್ಠಿಯಲ್ಲಿ ಬಿಡುಗಡೆ ಮಾಡಿದಾಗ ಪತ್ರಕರ್ತರ ಪ್ರಶ್ನೆಗಳಿಗೆ ತತ್ತರಿಸಿತು. ಮಹಿಳಾ ಆಯೋಗದ ಈ ವರದಿಯಲ್ಲಿ ಪೋಲೀಸರ ಅತಿರೇಕದ ಬಗ್ಗೆ ಉಲ್ಲೇಖವಿದೆ. ನಿರಾಶ್ರಿತರ ಶಿಬಿರಗಳಲ್ಲಿನ ದುರವಸ್ಥೆ, ಅಸಮರ್ಪಕ ಪರಿಹಾರ, ಸಂತ್ರಸ್ಥ ಬಗ್ಗೆ ಅಲ್ಲಿನ ಸಮಾಜದ ಔದಾಸೀನ್ಯ - ಇವೆಲ್ಲವನ್ನು ಕುರಿತು ವರದಿ ಮಾಡಿದರೂ ಗುಜರಾತ್ ಸರ್ಕಾರದ ಬಗ್ಗೆ ಸೊಲ್ಲೆತ್ತುವುದಿಲ್ಲ. ಶಾಂತಿ ಮತ್ತು ಶಿಸ್ತು ಕಾಪಾಡುವುದರಲ್ಲಿ ಸರ್ಕಾರದ ವೈಫಲ್ಯತೆಯನ್ನು ಗುರುತಿಸಿದರೂ ಟೀಕಿಸುವಾಗ ರಾಜ್ಯ ಯಂತ್ರದ ಬಗ್ಗೆ ಮೃದು ಧೋರಣೆಯನ್ನು ತಳೆಯುತ್ತದೆ. ಗುಜರಾತಿನಲ್ಲಿ ನಡೆದ ಹಿಂಸೆಯನ್ನು ವರದಿಯು ಪದೇ ಪದೇ 'ಗಲಭೆ, ದೊಂಬಿ'ಯೆಂದು ಪ್ರಸ್ತಾಪಿಸುತ್ತದೆ ಒಂದೇ ಒಂದು ಸಂದರ್ಭದಲ್ಲಿ ಮಾತ್ರ 'ಕೋಮು ದ್ವೇಷ'ವೆಂಬ ಪದವನ್ನು ಬಳಸುತ್ತದೆ.

ಮಹಿಳಾ ಆಯೋಗವು ಪ್ರಕಟಿಸಿರುವ ವರದಿಯ ಆರಂಭದಲ್ಲಿ ಈ ರೀತಿಯಲ್ಲಿ ಹೇಳಲಾಗಿದೆ. ''ಈಗಿನ ಸಂದರ್ಭದಲ್ಲಿ ನಾವು ಹಿಂತಿರುಗಿ ನೋಡುವುದರಲ್ಲಿ ಅರ್ಥವಿಲ್ಲ. ಭವಿಷ್ಯದ ಹಿತವನ್ನು ದೃಷ್ಟಿಯಲ್ಲಿಟ್ಟುಕೊಂಡು ಚಿಂತಿಸಬೇಕಾಗಿದೆ'' ಎಂದು ಬರೆಯುತ್ತಲೇ ಈ ವರದಿಯಲ್ಲಿ ಒಟ್ಟು ಪರಿಹಾರ ಮತ್ತು ಪುನರ್ವಸತಿ ಕಾರ್ಯಕ್ಕೆ ಸ್ತ್ರೀಪರ ದೃಷ್ಟಿಕೋನವೊಂದು ಸಾಧ್ಯವಾಯಿತೆಂಬ ಹೆಗ್ಗಳಿಕೆ ತಮ್ಮದೆಂದು ಆಯೋಗದ ಮುಖ್ಯಸ್ಥೆ ಹೇಳಿಕೊಂಡಿದ್ದಾರೆ.

ರಾಷ್ಟ್ರೀಯ ಮಹಿಳಾ ಆಯೋಗ ಗುಜರಾತ್ ಹತ್ಯಾಕಾಂಡದಲ್ಲಿ ಮಹಿಳೆಯರಿಗಾದ ದುರವಸ್ಥೆಯ ಬಗ್ಗೆ ಸಕಾಲದಲ್ಲಿ ಕ್ರಿಯಾತ್ಮಕವಾಗಿ ಸ್ಪಂದಿಸದೇ ಇರುವುದನ್ನು ನೋಡಿದರೆ ಅದು ಅಲ್ಲಿನ ಆಳುವ ಸರ್ಕಾರದ ಬಾಲಂಗೋಚಿಯಾಗಿ ಕಾಣುವುದು ಸ್ಪಷ್ಟವಾಗುತ್ತದೆ. ಇದು ಕೇವಲ ಅನುಮಾನವಾಗಿರದೆ ಇದನ್ನು ದೃಢೀಕರಿಸಲು ಬೇಕಾದಷ್ಟು ಪುರಾವೆಗಳಿವೆ. ಆಯೋಗದ ಮುಖ್ಯಸ್ಥೆ ಪೂರ್ಣಿಮಾ ಆದ್ವಾನಿ ಬರೆದ ಪುಸ್ತಕ ಕಳೆದ ವರ್ಷ ಹೈದರಾಬಾದ್‌ನಲ್ಲಿ ಬಿಡುಗಡೆಯಾಯಿತು. ಇದನ್ನು ಬಿಡುಗಡೆ ಮಾಡಲು ಕೇಂದ್ರದ ಗೃಹಮಂತ್ರಿ ಎಲ್. ಕೆ. ಆದ್ವಾನಿಯವರೇ ಆಗಮಿಸಿದ್ದರು. ಈ ಪುಸ್ತಕದಲ್ಲಿದ್ದ ಕೆಲವು ಮಾಹಿತಿಗಳು ಅಲ್ಪಸಂಖ್ಯಾತರ ವಿರುದ್ಧವಾಗಿದ್ದು ತಪ್ಪು ಮಾಹಿತಿಯನ್ನು ಕೊಡುವಂತಹದಾಗಿತ್ತು. ಉದಾಹರಣೆಗೆ, ಭಾರತದಲ್ಲಿ ಅತ್ಯಾಚಾರಗಳು ಆರಂಭವಾದದ್ದೇ ಮುಸ್ಲಿಂರ ಆಗಮನದ ನಂತರ ಎಂಬ ಮಾಹಿತಿಗಳಿದ್ದವು. ಇಂತಹ ಅಚಾರಿತ್ರಿಕ, ಬೇಜವಾಬ್ದಾರಿತನದ ವಿವರಗಳನ್ನು ಪ್ರತಿಭಟಿಸಿ ಮಹಿಳಾ ಸಂಘಟನೆಗಳು ಪುಸ್ತಕದ ನಿಷೇದಕ್ಕೆ ಒತ್ತಾಯಿಸಿದ್ದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಅವರ ಈ ಮಹತ್ಕಾರ್ಯಕ್ಕೆ ನಂತರ ಆಯೋಗದ ಮುಖ್ಯಸ್ಥೆಯ ಸ್ಥಾನವೂ ದೊರಕಿದೆ. ಅವರ ಅಂತಹ ನೇತೃತ್ವದಲ್ಲಿ ಆಯೋಗವು ಗುಜರಾತ್ ಹತ್ಯಾಕಾಂಡಕ್ಕೆ ಪ್ರತಿಕ್ರಿಯಿಸಿರುವ ರೀತಿಗೆ ಕಾರಣ ದೊರೆಯುತ್ತದೆ.

# ಮಹಿಳೆ, ಮಾನಭಂಗ ಮತ್ತು ಪ್ರತ್ಯಕ್ಷ ಸಾಕ್ಷಿ

ಪುರುಷರ ಕಾಳಗದಲ್ಲಿ ಹೆಣ್ಣು ಸದಾ ಹಿಂಸೆಗೆ ಗುರಿಯಾಗುತ್ತಾಳೆ. ಅಪರಾಧ ಮಾಡುವುದು ಯಾರೋ, ಶಿಕ್ಷೆ ಅನುಭವಿಸುವವರು ಇನ್ಯಾರೋ, ಅಫ್ಘಾನಿಸ್ತಾನದಲ್ಲಿ ಮಹಿಳೆಯರ ಮೇಲೆ ವಿಧಿಸಿದ್ದ ಚಂಡಶಾಸನಗಳನ್ನು ಕೇಳಿ 'ಇಪ್ಪತ್ತೊಂದನೆ ಶತಮಾನದಲ್ಲೂ ಮಹಿಳೆ ಇಷ್ಟು ಅಸ್ವತಂತ್ರಳೆ' ಎಂದು ಉದ್ಗರಿಸಿದ್ದವು. ಈಗ ಪಕ್ಕದ ಪಾಕಿಸ್ತಾನದ ಕತೆ ಕೇಳಿ. ಎಳೆಯ ವಯಸ್ಸಿನ ಸಫ್ರನ್‌ಳ ವಿವಾಹ ಹದಿಮೂರು ವರ್ಷಗಳ ಹಿಂದೆ ನಾಯ್ಮತ್ ಖಾನ್ ಜೊತೆ ನೆರವೇರಿತ್ತು. 1992ರಲ್ಲಿ ಪತಿ ಕೊಲೆ ಅಪರಾಧದ ಮೇಲೆ ಜೈಲಿಗೆ ಹೋದ. ಆಗಿನಿಂದ ಗಂಡನ ತಮ್ಮನ ಕಾಮ ಪಿಪಾಸೆಗೆ ಸಫ್ರನ್ ಬಲಿಯಾದಳು. ಪಾಕಿಸ್ತಾನದ ಕಾನೂನು ಈ ಅಮಾಯಕ ಮಹಿಳೆಗೆ ಯಾವುದೇ ರಕ್ಷಣೆ ಒದಗಿಸಲಿಲ್ಲ. ಕಾನೂನಿನ ಪ್ರಕಾರ ತನ್ನ ಮೇಲಾದ ಅತ್ಯಾಚಾರವನ್ನು ಸಾಬೀತು ಪಡಿಸಲು ಸಫ್ರನ್ ನಾಲ್ಕು ಜನ ಗಂಡಸರ ಅಥವಾ ಎಂಟು ಜನ ಹೆಂಗಸರ ಪ್ರತ್ಯಕ್ಷ ಸಾಕ್ಷಿ ತೋರಿಸಬೇಕಿತ್ತು! ಅದು ಸಾಧ್ಯವಾಗದ ಕಾರಣ ಸಫ್ರನ್‌ಳನ್ನು ವ್ಯಭಿಚಾರದ ಅಪರಾಧದ ಮೇಲೆ ಬಂಧಿಸಲಾಯಿತು. ಕಟ್ಟುನಿಟ್ಟಾದ ಇಸ್ಲಾಮ್ ಕಾನೂನಿನಡಿ 'ವ್ಯಭಿಚಾರ'ದ ಅಪರಾಧಕ್ಕೆ 'ಸಫ್ರನ್‌ಳನ್ನು ಕಲ್ಲು ಹೊಡೆದು ಕೊಲ್ಲು'ವಂತಹ ಕ್ರೂರ ಶಿಕ್ಷೆಯನ್ನು ಕೋರ್ಟು ವಿಧಿಸಿದೆ. ಹೇಗಿದೆ ನೋಡಿ ನ್ಯಾಯ, ತಪ್ಪು ಮಾಡುವವನು ಗಂಡಸು, ಹೆಂಗಸಿಗೆ ನ್ಯಾಯ ದೊರಕಿಸಿಕೊಡುವುದಿರಲಿ, ಅವಳಿಗೇ ಶಿಕ್ಷೆ ವಿಧಿಸುತ್ತಾರೆ. ಒಂದು ಇಸ್ಲಾಂ ದೇಶದ ನ್ಯಾಯದ ಈ ಪರಿ ನಿಮಗೆ ಅತ್ಯಂತ ಭೀಕರವಾಗಿ ಕಂಡರೆ, ಹಿಂದುತ್ವ ಮೆರೆದ ನಮ್ಮ ಗುಜರಾತಿನಲ್ಲಿ ಪರಿಸ್ಥಿತಿ ಇದಕ್ಕಿಂತ ಭಿನ್ನವಲ್ಲ ಎಂದು ನೆನಪಿಸಿಕೊಳ್ಳಿ. ಪುಣ್ಯಕ್ಕೆ ನಮ್ಮ ಕಾನೂನು ಇಷ್ಟು ಕುರುಡಾಗಿಲ್ಲ, ಮಹಿಳೆಯ ವಿರೋಧವಿಲ್ಲ. ಆದರೆ ಪಾಲಿಸದ ಕಾನೂನು ಎಷ್ಟು ನೆಟ್ಟಗಿದ್ದರೂ ಪ್ರಯೋಜನವಿಲ್ಲ. ಇಂದು ಗುಜರಾತಿನಲ್ಲಿ ಅತ್ಯಾಚಾರಕ್ಕೆ ಒಳಗಾದ ಮಹಿಳೆಯರಿಗೆ ತಮ್ಮ ಕತೆ ಹೇಳಿಕೊಳ್ಳುವ ಧೈರ್ಯವೂ ಇಲ್ಲ. ಅತ್ಯಾಚಾರ ಎಸಗಿದವರು ತಲೆ ಎತ್ತಿ ತಿರುಗುತ್ತಿದ್ದಾರೆ. 'ಅತ್ಯಾಚಾರ ಸಾಧ್ಯವೇ ಇರಲಿಲ್ಲ' ಎಂದು ಪೋಲೀಸರು ತರ್ಕಿಸುತ್ತಿದ್ದಾರೆ. ಮುಸ್ಲಿಂ ಕಾನೂನು ಬಯಸುವ ನಾಲ್ಕು ಗಂಡು, ಎಂಟು ಹೆಣ್ಣಿನ ಸಾಕ್ಷಿ ಹಿಡಿದು ತಂದರೂ ಇಲ್ಲಿ ಹಿಂದುತ್ವದ ನ್ಯಾಯದ ಬಾಗಿಲು ಬಿಗಿದುಕೊಂಡಿದೆ. ಆದರೆ ಪಾಕಿಸ್ತಾನದಲ್ಲಾಗಲಿ, ಭಾರತದಲ್ಲಾಗಲಿ ಇಂದು ಮಹಿಳೆ ಅನ್ಯಾಯವನ್ನು ಅನುಭವಿಸುತ್ತಾ ಕೈ ಕಟ್ಟಿ ಕುಳಿತಿಲ್ಲ. ಸಫ್ರನ್ ತಾಯಿ ಶಿರಕ್ ಬಿಬಿ, ಮಗಳನ್ನು ಉಳಿಸಿಕೊಳ್ಳಲು ಹೋರಾಡುತ್ತಿದ್ದಾಳೆ. ಭಾರತದಲ್ಲಿ ಇಡೀ ಸ್ತ್ರೀ ಸಮುದಾಯ ಗುಜರಾತಿನಲ್ಲಾದ ಅತ್ಯಾಚಾರದ ವಿರುದ್ಧ ಕೂಗೆಬ್ಬಿಸಿದೆ.

ಒಂದೂ ನೂರಿನ್ನೂರು ಮಹಿಳೆಯರ ಮೇಲೆ ಅತ್ಯಾಚಾರ ನಡೆದರೆ ಇಷ್ಟೆಲ್ಲ ಗದ್ದಲವೇಕೆ ಎಂದು ಆಳುವ ಮಾರ್ಗಕ್ಕೆ ಅರ್ಥವಾಗಿಲ್ಲ. 'ಇದೇನು ಮೊದಲ ಬಾರಿಯೇ ತಾಯಿಯ ಹೊಟ್ಟೆ ಸೀಳಿ ಮಗುವನ್ನು ಹೊರತೆಗೆದು ಚೆಂಡಾಡಿದ್ದು, ಇದೇನು ಮೊದಲ ಬಾರಿಯೆ ತಾಯಿಯ ಎದುರೇ ಮಗಳ ಮಾನ ಹರಣ ನಡೆದದ್ದು?' ದೇಶದ ರಕ್ಷಣಾ ಮಂತ್ರಿ ಪಾರ್ಲಿಮೆಂಟಿನಲ್ಲಿ ಪ್ರಶ್ನಿಸಿದರು. ದೇಶದ ರಕ್ಷಣೆಯಲ್ಲಿ ಮಹಿಳೆಯರ ರಕ್ಷಣೆ ಸೇರಿದಂತಿಲ್ಲ. ದಿಟವೆ, ಇದೇನು ಮೊದಲ ಬಾರಿಯಲ್ಲ ಈ ದೇಶದಲ್ಲಿ ಮಹಿಳೆಯ ಮಾನಹರಣವಾದದ್ದು, ಇವರ ಧೋರಣೆಯನ್ನು ನೋಡಿದರೆ ಇದು ಕಡೆಯ ಬಾರಿಯೂ ಅಲ್ಲ ಎಂದು ಖಾತ್ರಿ ಆಗುತ್ತದೆ. ಐದು ಸಾವಿರ ವರ್ಷಗಳ ಹಿಂದೆಯೇ ಅತ್ತಿಗೆಯನ್ನು ತುಂಬು ಸಭೆಯಲ್ಲಿ ಬೆತ್ತಲೆ ಮಾಡ ಹೊರಟ ದುಷ್ಯಾಸನ, ದುರ್ಯೋಧನರಿದ್ದರು. ಧರ್ಮ ಸೂಕ್ಷ್ಮವನ್ನರಿತ, ಗುರು ಹಿರಿಯರು ಅತಿರಥ ಮಹಾರಥರು ಕುಲವಧುವಿನ ಸೀರೆ ಎಳೆಯುವುದನ್ನು ನೋಡಿಯೂ ಕೈಕಟ್ಟಿ ಕುಳಿತರು. ಪುರುಷರ ಯುದ್ಧದಲ್ಲಿ ಹೆಣ್ಣು ಸದಾ ಪಣಕ್ಕಿಟ್ಟವಳು. ಇದೇ ದುಷ್ಯಾಸನರ ಸಂತತಿ ಮುಂದುವರೆದಿದೆ. 'ಇದೇನು ಮೊದಲ ಬಾರಿಯೆ, ಯಾಕಿಷ್ಟು ಹೊಡಕೊಳ್ಳುತ್ತೀರಿ, ಇದರಲ್ಲಿ ಹೊಸದೇನು?' ಎಂದು ಕಣ್ಮುಚ್ಚಿ ಕುಳಿತ ಭೀಷ್ಮ, ದ್ರೋಣ, ಧೃತರಾಷ್ಟ್ರ ನಮ್ಮ ಸರಕಾರದ ಉನ್ನತ ಹುದ್ದೆಯಲ್ಲಿದ್ದಾರೆ. ಆದರೆ ಭಾರತದ ಮಹಿಳೆ ಇಂದು ಗಂಡಸರ ಎಗ್ಗಿಲ್ಲದ ತಪ್ಪುಗಳಿಗೆ ಕುರುಡಾಗಿ ಕಣ್ಣಿಗೆ ಬಟ್ಟೆ ಕಟ್ಟಿ ಕುಳಿತ ದ್ವಾಪರಯುಗದ ಗಾಂಧಾರಿಯಲ್ಲ. ತನ್ನ ಸೆರಗ ಎಳೆದ ದುಷ್ಯಾಸನನ ರಕ್ತಮೂಳೆಗಳಿಂದಲೇ ಮುಡಿ ಬಾಚಿ ಕಟ್ಟಿದ ಅಗ್ನಿಕನ್ಯೆಯೂ ಅಲ್ಲ. ರಕ್ಷಣಮಂತ್ರಿಯ ಬೇಜವಾಬ್ದಾರಿ ಮಾತುಗಳಿಗೆ ಇಡೀ ಭಾರತದ ಸ್ತ್ರೀಸಮುಧಾಯ ಪ್ರತಿಕ್ರಿಯಿಸಿತು. ಅಪರಾಧಿಗಳಿಗೆ ಶಿಕ್ಷೆ, ನಿರಾಶ್ರಿತರಿಗೆ ರಕ್ಷಣೆಯ ಪಣ ತೊಟ್ಟಿತು. ಇಷ್ಟು ದೊಡ್ಡ ಪ್ರಮಾಣದ ಅತ್ಯಾಚಾರವನ್ನು ಆಗಗೊಟ್ಟು ಕೈಕಟ್ಟಿ ಕುಳಿತ ಸರಕಾರವನ್ನು ಉರುಳಿಸಲಾಗದಿದ್ದರೂ, ಅಲುಗಾಡಿಸಿತು.

ಇಷ್ಟು ಅಗಾಧ ಸಂಖ್ಯೆಯಲ್ಲಿ ಮಹಿಳೆಯರ ಮಾನಹರಣವಾಗಿ ಮೂರು ತಿಂಗಳಾದರೂ ಒಂದೇ ಒಂದು ಎಫ್.ಐ.ಆರ್. ದಾಖಲಾಗಿರಲಿಲ್ಲ. ಅತ್ಯಾಚಾರ ಮಾಡಿದ್ದಲ್ಲದೆ, ನಿರಾಶ್ರಿತ ಶಿಬಿರದಲ್ಲಿ ಭಯಭೀತರಾದ ಈ

ಮಹಿಳೆಯರಿಗೆ ಶರತ್ತು ಹಾಕ ತೊಡಗಿದ್ದರು - 'ಅತ್ಯಾಚಾರದ ಕೇಸು ಬಿಟ್ಟು ಬಿಡಿ, ಹಿಂತಿರುಗಲು ಅವಕಾಶ ಮಾಡಿಕೊಡುತ್ತೇವೆ. ಇಲ್ಲದಿದ್ದರೆ ನೋಡಿಕೊಳ್ಳುತ್ತೇವೆ.' ಇಂತಹ ಭೀತಿಯ ವಾತಾವರಣದಲ್ಲಿ 'ನನ್ನ ಪ್ರಾಣ ಹೋದರೂ ಸರಿ, ಅತ್ಯಾಚಾರಕ್ಕೆ ಒಳಗಾದ ಮಹಿಳೆಯರಿಗೆ ನ್ಯಾಯ ದೊರಕಿಸಿಕೊಡುವೆ' ಎಂದು ಮುಂದೆ ಬಂದವಳು, ಜನ್ನತ್‌ಬಿಬಿ ಕಲ್ಲುಭಾಯ್ ಶೇಖ ಎಂಬ ಸಾಮಾನ್ಯ ಮಹಿಳೆ. ಈಕೆಯ ಧೈರ್ಯ ದಿಟ್ಟತನದಿಂದ, ಅಹಮದಾಬಾದಿನಲ್ಲಿ ಮೊಟ್ಟಮೊದಲ ಅತ್ಯಾಚಾರದ ಕೇಸು ದಾಖಲಾಯಿತು, ಅಪರಾಧಿಯ ಬಂಧನಕ್ಕೆ ಕಾರಣವಾಯಿತು. ಫೆಬ್ರವರಿ 28ರಂದು, ಕೊಲೆ, ಗಲಭೆಯಲ್ಲಿ ಬಾಗಿಯಾಗಿ, ಐದು ಜನ ಮಹಿಳೆಯರ ಮೇಲೆ ಅತ್ಯಾಚಾರ ನಡೆಸಿದ ಆರೋಪಿ ರತಿಲಾಲ್ ರಾಠೋಡ್ ಉರುಫ್ ಭಾವನಿಸಿಂಗ್‌ನನ್ನು ಬಂಧಿಸಲಾಯಿತು. ಅವನು ನಡೆಸಿದ ಅತ್ಯಾಚಾರಗಳನ್ನು ಪ್ರತ್ಯಕ್ಷ ಕಂಡ ಜನ್ನತ್ ಬಿಬಿ 'ಈ ಮನುಷ್ಯನಿಗೆ ಶಿಕ್ಷೆಯಾಗಬೇಕು. ಅದಕ್ಕಾಗಿ ನಾನು ಏನು ಮಾಡಲೂ ಸಿದ್ಧ, ಸಾಯಲೂ ಸಿದ್ಧ' ಎಂದು ಮುಂದೆ ಬಂದಿದ್ದಾಳೆ. ಐವತ್ತು ವರ್ಷದ ರಾಠೋಡ್ ಅಹಮದಾಬಾದಿನ ಮುನಿಸಿಪಲ್ ಸಾರಿಗೆ ಸಂಸ್ಥೆಯಲ್ಲಿ ಡ್ರೈವರ್. ಜನ್ನತ್ ಬಿಬಿ ಈತ ನಡೆಸಿದ ಹತ್ಯೆ, ಅತ್ಯಾಚಾರಗಳನ್ನು ಕಣ್ಣಿಂದ ಕಂಡವಳು. ಈಕೆ ಶಾ ಅಲಮ್ ಪೋಲೀಸು ಚೌಕಿಯಲ್ಲಿ ದೂರು ಫೈಲ್ ಮಾಡಿ, ಕ್ರೈಂ ಬ್ರಾಂಚಿನಲ್ಲಿ ಲಿಖಿತ ಮೂಲಕ ಸ್ಟೇಟಮೆಂಟ್ ಕೊಟ್ಟದ್ದಲ್ಲದೆ, ಕೇಸಿನ ಪರ ವಾದಿಸಲು ಈ ಅಮಾಯಕ ಮಹಿಳೆ ದಿಲ್ಲಿಯವರೆಗೂ ಹೋಗಿ ಬಂದವಳು. ರಾಷ್ಟ್ರಪತಿಗಳನ್ನು ಕಂಡು 'ನಾನು ಅತ್ಯಾಚಾರಿಯನ್ನು, ಕೊಲೆಗಾರನನ್ನು ಗುರುತಿಸಬಲ್ಲೆ' ಎಂದು ಹೇಳಿದಳು. ಇಷ್ಟೇ ಅಲ್ಲ, ಜನ್ನತ್‌ಬಿಬಿಯ ಸಾಕ್ಷ್ಯ, 'ಮಾತೃದೇವೋಭವ' ಎಂಬ ನಾಡಿನ ಅತ್ಯಂತ ಭೀಕರ ಹತ್ಯೆಯನ್ನು ಬೆಳಕಿಗೆ ತಂದಿತು. ಎಂಟು ತಿಂಗಳ ಗರ್ಭಿಣಿ ಕೌಸರ್ ಭಾನೂಳನ್ನು ಎಳೆದಾಡಿ, ಕತ್ತಿಯಿಂದ ಆಕೆಯ ಹೊಟ್ಟೆಯನ್ನು ಸೀಳಿ ಭ್ರೂಣವನ್ನು ಹೊರಗೆಳೆದು ಈಕೆಯ ಕಣ್ಣೆದುರೇ ಸುಟ್ಟು ಹಾಕಿದರು. 'ಭಯದಿಂದ ಅವಿತಿಟ್ಟುಕೊಂಡಿದ್ದ ನಾವುಗಳು ಇದನ್ನೆಲ್ಲ ನೋಡಿದೆವು. ಒಬ್ಬರು ಕೂಡಾ ಸಹಾಯಕ್ಕೆ ಬರಲಾಗಲಿಲ್ಲ' ಎನ್ನುತ್ತಾಳೆ ಜನ್ನತ್ ಬಿಬಿ.

ಹಿಂದೆಲ್ಲ ಕೋಮುಗಲಭೆಯಲ್ಲಿ ಬಹಳಷ್ಟು ಬಾರಿ ರಾಜಕಾರಣಿಗಳ ರಾಜಕೀಯದ ಸಂಚಿನಲ್ಲಿ ಹೊರಗಿನಿಂದ ಬಂದವರು ದಾಂದಲೆ ಎಬ್ಬಿಸಿ ಹೋಗುತ್ತಿದ್ದುದು ಸಾಮಾನ್ಯವಿತ್ತು. ಆದರೆ ಇಂದು ಕೋಮುದ್ವೇಷದ ವಿಷವನ್ನು ಎಷ್ಟೊಂದು ಪಸರಿಸಿದ್ದಾರೆ ಎಂದರೆ ಅದಾಗಲೆ ನರನಾಡಿಗಳಲ್ಲಿ, ಊರು ಕೇರಿ ಮೂಲೆ ಮೂಲೆಗಳಲ್ಲೂ ಹರಿಯುತ್ತಿದೆ. ಸರ್ಕಾರಿ ನೌಕರರೂ, ನಿನ್ನೆ ಮೊನ್ನೆಯವರೆಗೂ ನಿಮ್ಮ ಬಗಲಲ್ಲಿ ಬ್ಬದುಕಿದವರೂ, ಇಂದು ನಿಮ್ಮ ಮೇಲೆ ಅಮಾನುಷ ಅತ್ಯಾಚಾರವೆಸಗಬಲ್ಲ ಸಾಧ್ಯತೆಯನ್ನು ತಂದಿದೆ.

ಇಂದು ಸ್ವತಂತ್ರ ಭಾರತದಲ್ಲಿ ಮಹಿಳೆ ಅಸುರಕ್ಷಿತಳಾಗಿದ್ದಾಳೆ. ಎಷ್ಟರ ಮಟ್ಟಿಗೆ ಎಂದರೆ ಗುಜರಾತಿನ ಕೋಮುಗಲಭೆಯಂತಹ ಸಂದರ್ಭದಲ್ಲಿ ಮಾತ್ರವಲ್ಲ, ಒಂದು ಬಸ್ ಪ್ರಯಾಣದಲ್ಲೂ ಆಕೆ ಅಸುರಕ್ಷಿತಳು. ಇತ್ತೀಚೆಗಷ್ಟೆ ನಡೆದ ಘಟನೆಯನ್ನು ನೋಡಿ. ಕಲಕತ್ತೆಯಲ್ಲಿ ಬಸ್ಸೊಂದಕ್ಕೆ ಐದು ಜನ ಗಂಡಸರು ಹತ್ತಿಕೊಂಡರು. ಅಲ್ಲಿದ್ದ ಇಬ್ಬರು ಹೆಂಗಸರನ್ನು ಅಲ್ಲೋಲ ಅಸಹ್ಯ ಹಾವಭಾವದಿಂದ ಚುಡಾಯಿಸತೊಡಗಿದರು. ಅವರಲ್ಲೊಬ್ಬ ಮಹಿಳೆಯನ್ನು ಮುಟ್ಟಿ ಪೀಡಿಸತೊಡಗಿದ. ಹುಡುಗಿಯರು ಹೆದರಿ ನಡುಗಿ ಕುಳಿತಾಗ, ಆರು ತಿಂಗಳ ಮಗಳೊಟ್ಟಿಗೆ ಕುಳಿತಿದ್ದ ವಿವಾಹಿತ ಸಂಜಿತ್ ದಾಸ್ ಎದ್ದು ನಿಂತು ಆ ಯುವಕರ ಕ್ರಿಯೆಯನ್ನು ಪ್ರತಿಭಟಿಸಿದ. ಅವರ ನಡುವೆ ಚಕಮಕಿ ನಡೆಯುತ್ತಿದ್ದಂತೆ ಪ್ರಯಾಣಿಕರೆಲ್ಲರು ಮೂಕ ಪ್ರೇಕ್ಷಕರಾಗಿ ನಿಂತು ನೋಡಿದರು. ಆ ಹುಡುಗರು ದಾಸಗೆ 'ನಮ್ಮ ತಂಟೆಗೆ ಬರಬೇಡ, ತಾವು ಏನು ಬೇಕಾದರೂ ಮಾಡಿಕೊಳ್ಳುತ್ತೇವೆ' ಎಂದು ಎಚ್ಚರಿಸಿದರು. ದಾಸ್ ಹಿಂದೆ ಸರಿಯಲಿಲ್ಲ, ಆ ಹುಡುಗರಲ್ಲೊಬ್ಬ ತಟ್ಟನೆ ಜೇಬಿನಿಂದ ಗನ್ ತೆಗೆದು ದಾಸನ ಕುತ್ತಿಗೆಗೆ ಗುಂಡಿಟ್ಟು ಹೊರ ಹಾರಿದ. ಹೆಣ್ಣಿನ ರಕ್ಷಣೆ ಧಾವಿಸಿದ ಏಕಾಂಗಿ ದಾಸ ಜೀವ ಕಳಕೊಂಡ. ಇಂದು ಗನ್ನು, ಬಂದೂಕುಗಳು ದೊರೆಯುವುದು ಸುಲಭವಾಗುತ್ತಿವೆ. ಪ್ರಭಾವಿ ವ್ಯಕ್ತಿಗಳ ಮಕ್ಕಳು ಎಗ್ಗಿಲ್ಲದೆ ದಾಂದಲೆ ನಡೆಸಿ ಕಾನೂನು ಜರಡಿಯಲ್ಲಿ ಅನಾಯಾಸವಾಗಿ ಜಾರಿಕೊಳ್ಳುತ್ತಾರೆ. ಅಮೆರಿಕದಂತೆ ಶಾಲಾ ಮಕ್ಕಳೂ ಗನ್ನು ಹಿಡಿದು ಓಡಾಡಿದರೆ ಅಚ್ಚರಿ ಇಲ್ಲ.

ಮೂರು ತಿಂಗಳು ಹೊತ್ತಿ ಉರಿದ ಕೋಮುಗಲಭೆಯ ನಂತರ ಮೋದಿ ಸರಕಾರ ಕೊಲೆ ಸುಲಿಗೆಯ ಎಫ್.ಐ.ಆರ್. ದಾಖಲಿಸಿಕೊಳ್ಳತೊಡಗಿತು. ಆದರೆ ಅತ್ಯಾಚಾರದ ಕೇಸುಗಳನ್ನು ದಾಖಲಿಸಿಕೊಳ್ಳಲು ನಿರಾಕರಿಸತೊಡಗಿತು. ಎಗ್ಗಿಲ್ಲದೆ ನಡೆದ ಅತ್ಯಾಚಾರಗಳಿಗೆ ಪ್ರತ್ಯಕ್ಷ ಸಾಕ್ಷಿಗಳಿದ್ದರೂ ಅಪರಾಧ ನಡೆಯಲೇ ಇಲ್ಲವೆಂದು ನಟಿಸಿತು. ಪೋಲೀಸ್ ಕಮಿಷನರ್ ಪಿ.ಸಿ. ಪಾಂಡೆ 'ವಿಶೇಷ ಮಹಿಳಾ ಸೆಲ್‌ಗಳ ಅಗತ್ಯವಿಲ್ಲ' ಎಂದು ಗಟ್ಟಿಯಾಗಿ ನಂಬಿದಾತ. ಸಹ ಪೋಲೀಸ್

ಕಮೀಷನರ್ ಎಂ.ಕೆ. ಟಾಂಡನ್ 'ಕೆಲವು ಮಹಿಳೆಯರಿಂದ 'ಬೇಇಜ್ಜತ್' ದೂರುಗಳು ಬಂದಿವೆ. 'ಬೇಇಜ್ಜತ್' ಎಂದರೆ ಅತ್ಯಾಚಾರ ಎಂದೇನೂ ಅಲ್ಲ' ಎಂದು ವಾದಿಸಿದ. ಹೆಣ್ಣು ಅದೆಷ್ಟು ಬಗೆಯಲ್ಲಿ ಅದೆಂತಹ ಪದಗಳಲ್ಲಿ ತನ್ನ ಮೇಲಾದ ಅತ್ಯಾಚಾರವನ್ನು ವರ್ಣಿಸಬೇಕಿತ್ತೋ ಇವರಿಗೇ ಗೊತ್ತು. ಅಷ್ಟೇ ಅಲ್ಲ 'ಅಂತಹ ಗಲಭೆಯಲ್ಲಿ ಅತ್ಯಾಚಾರ ನಡೆಯಲು ಸಾಧ್ಯವೇ ಇರಲಿಲ್ಲ. ಗುಂಪುಗಳು ಜನರ ಮೇಲೆ ಆಕ್ರಮಣ ಮಾಡುವಾಗ ಹೆಂಗಸರ ಮೇಲೆ ಮಾನಭಂಗ ಮಾಡಲು ಹೇಗೆ ಸಾಧ್ಯ?' ಎಂದು ತಮ್ಮ ತರ್ಕಜ್ಞಾನವನ್ನು ಪ್ರದರ್ಶಿಸಿದರು. ಅತ್ಯಾಚಾರಕ್ಕೆ ಸಾಕ್ಷಿಗಳು ಬೇಕಷ್ಟಿದ್ದಾರೆ. ನಿರಾಶ್ರಿತರ ಬಿಡಾರದಲ್ಲಿರುವ ನಾಯಿಮುದ್ದೀನ್ ಶೇಕ್ ತನ್ನ ಪತ್ನಿ ಗುಂಪು ಅತ್ಯಾಚಾರಕ್ಕೆ ಬಲಿಯಾದದ್ದನ್ನು ಕಣ್ಣಾರೆ ಕಂಡವ. ಆಕೆಯ ಕೈ ಕತ್ತರಿಸಿ ಎಸೆದದ್ದನ್ನು ನೋಡಿದವ. ತಾನು ವಿವರಗಳನ್ನು ನೀಡಲು ಸಿದ್ಧವಿದ್ದರೂ ಯಾರೊಬ್ಬರೂ ಕೇಳಲು ತಯಾರಿಲ್ಲ ಎಂದು ಗೋಳಾಡುತ್ತಿದ್ದಾನೆ. ಫಾತಿಮಾಬೆನ್ ನರೋಡಾ ಪಾಟಿಯಾದ ಅನೇಕ ಹೆಣ್ಣುಮಕ್ಕಳ ಮೇಲಾದ ಅತ್ಯಾಚಾರವನ್ನು ಕಂಡವಳು. ಸರೀನಾ ಎಂಬ ಎಳೆಯ ಹುಡುಗಿಯನ್ನು ಮುಖ್ಯಬೀದಿಯಲ್ಲಿ ಅಟ್ಟಿಸಿಕೊಂಡು ಹೋಗಿ ಬೆತ್ತಲು ಮಾಡಿ ಗುಂಪು ಅತ್ಯಾಚಾರ ಮಾಡಿ ಕೊಂದದ್ದನ್ನು ನೋಡಿದವಳು. ಈಕೆ ತನ್ನ ದೂರು ದಾಖಲಾಗದೆ ಕಾಯುತ್ತಿದ್ದಾಳೆ. ಅಸಿಫ್ ಅಬ್ದುಲ್ಲಾನ ಹೆಂಡತಿಯನ್ನು ಅತ್ಯಾಚಾರ ಮಾಡಿ ಸುಟ್ಟರು. ನನ್ನ ನಾದಿನಿ ಮತ್ತು ಹಲವು ಹೆಂಗಸರ ಮಾನಭಂಗವನ್ನೂ ಮಾಡಿದರು. ಬೆಂಕಿಗೆ ಹಾಕಿ ಸುಟ್ಟರು. ನನ್ನ ದೂರು ದಾಖಲಿಸುವ ಪೋಲೀಸರಿಲ್ಲ. ಬಹಳಷ್ಟು ಮಹಿಳೆಯರು ತಮ್ಮ ಮೇಲಾದ ಅತ್ಯಾಚಾರವನ್ನು ಹೇಳಲೂ ಹೆದರುತ್ತಾರೆ. ನ್ಯಾಯದ ಹಾದಿ ಬಲುದೂರವಿದೆ.

ಇತ್ತೀಚೆಗೆ ಮಹಾರಾಷ್ಟ್ರದ 'ರಾಜ್ಯ ಮಹಿಳಾ ಆಯೋಗ' ದುರ್ಯೋಧನ ಮತ್ತು ರಾಕ್ಷಸ ಪುರಸ್ಕಾರ ನೀಡಿತು. ಮಹಿಳೆಯರನ್ನು ಕುರಿತು ಅತ್ಯಂತ ಕೆಟ್ಟ ಚಿತ್ರ ತೆಗೆದವರಿಗೆ 'ದುರ್ಯೋಧನ ಪ್ರಶಸ್ತಿ', ಭೀಕರ ಹಿಂಸೆಯ ಚಿತ್ರ ತೆಗೆದವರಿಗೆ 'ರಾಕ್ಷಸ ಪ್ರಶಸ್ತಿ' ಘೋಷಿಸಿತು. ಈ ಬಾರಿ ರಾಕೇಶ್ ಓಂ ಪ್ರಕಾಶ್ ಮೆಹ್ರಾರ 'ಅಕ್ಸ್' ಮತ್ತು ಶೇಷಗಿರಿರಾವ್ ಅವರ ಚಿತ್ರಗಳಿಗೆ ಈ ಪ್ರಶಸ್ತಿಗಳು ಲಭಿಸಿದವು. ಗುಜರಾತಿನಲ್ಲಿ ಇಂತಹ ಪ್ರಶಸ್ತಿಗಳನ್ನು ಘೋಷಿಸಿದ್ದರೆ, ದುರ್ಯೋಧನ ಮತ್ತು ರಾಕ್ಷಸ ಪುರಸ್ಕಾರಗಳೆರಡೂ ಒಟ್ಟಿಗೇ, ಸರ್ಕಾರಕ್ಕೆ ಸಲ್ಲುತ್ತಿದ್ದವು.

★ ★ ★

RNI No. 45577/88

"Achala" 108, Skyline Surabhi,
14 - P , Vidyapeeta Road,
BSK III Stage,
Bangalore - 560 085

To :

Smt/Sri

CPMG/KA/BG-8/2002
Book-Post/News Letter